CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೫, ೨೦೦೪ ( ಶ್ರಾವಣ ೧೪, ಶಕ ವರ್ಷ ೧೯೨೬) | ಸಂಚಿಕೆ ೩೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾರ್ಮಿಕ ಸಚಿವಾಲಯ

**ವಿಷಯ:** ಕಾರಾವಿ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ದಿನಾಂಕ: 01.04.2000 ರಂದು ಖಾಲಿ ಇದ್ದ ಹುದ್ದೆಗಳಲ್ಲಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಈಕಾಅ 2000, ದಿನಾಂಕ: 04.10.2000.
2. ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ಶೇಕಡ 80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ದಿನಾಂಕ: 30.10.2002 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಕೊಠಡಿಯಲ್ಲಿ ನಡೆದ ಸಭೆಯ ನಡವಳಿಗಳು.
3. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಅಭಿವೃದ್ಧಿ:89:2000-01, ದಿನಾಂಕ: 25.5.2004 ಹಾಗೂ ದಿನಾಂಕ: 5.6.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 04.10.2000ರ ಸರ್ಕಾರಿ ಆದೇಶದಲ್ಲಿ 2000-01ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯವರು ಪ್ರಸ್ತಾಪಿಸಿದಂತೆ ಸರ್ಕಾರದ ಇಲಾಖೆಗಳಲ್ಲಿ ಖಾಲಿ ಇರುವ ಹುದ್ದೆಗಳ ಸ್ಥಿತಿಯನ್ನು ವಿಮರ್ಶಿಸಿ ಅವುಗಳಲ್ಲಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಪರಿಶೀಲಿಸಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕಾರ್ಯತಂಡವನ್ನು ರಚಿಸಲಾಗಿತ್ತು.

ರಾಜ್ಯ ಸರ್ಕಾರದ ಇಲಾಖೆಗಳಲ್ಲಿ ಶೇಕಡ 80 ರಷ್ಟು ಖಾಲಿ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಚರ್ಚಿಸಲು ದಿನಾಂಕ: 30.10.2002 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಕೊಠಡಿಯಲ್ಲಿ ನಡೆದ ಸಭೆಯಲ್ಲಿ ಕಾರಾವಿ ಯೋ (ವೈ) ಸೇವೆಗಳು ಇಲಾಖೆಯಲ್ಲಿ ಖಾಲಿಯಿರುವ ಹುದ್ದೆಗಳಲ್ಲಿ ವೈದ್ಯ ಹುದ್ದೆಗಳನ್ನು ಬಿಟ್ಟು ಮಿಕ್ಕುಳಿದ ಹಾಲಿ ಖಾಲಿ ಹುದ್ದೆಯಲ್ಲಿ ಶೇಕಡ 80 ರಷ್ಟು ಮಟ್ಟಿಗಿನ ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಒಂದು ತಿಂಗಳ ಕಾಲಾವಧಿಯಲ್ಲಿ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ದಿನಾಂಕ: 25.5.2004ರ ತಮ್ಮ ಪತ್ರದಲ್ಲಿ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಇಲಾಖೆಯಲ್ಲಿ ದಿನಾಂಕ: 1.4.2000 ರಂದು ವಿವಿಧ ವೃಂದಗಳಲ್ಲಿ ಖಾಲಿ ಇದ್ದ 1481 (ಒಂದು ಸಾವಿರದ ನಾಲ್ಕುನೂರ ಎಂಬತ್ತೊಂದು) ಹುದ್ದೆಗಳ ಪೈಕಿ 497 (ನಾಲ್ಕುನೂರ ತೊಂಬತ್ತೇಳು) ಹುದ್ದೆಗಳನ್ನು ರದ್ದುಗೊಳಿಸಬಹುದಾಗಿದೆ ಎಂದು ತಿಳಿಸುತ್ತಾ ರದ್ದುಗೊಳಿಸಬಹುದಾದ ಹುದ್ದೆಗಳ ವಿವರಗಳನ್ನು ದಿನಾಂಕ: 5.6.2004ರ ತಮ್ಮ ಪತ್ರದಲ್ಲಿನ ಅನುಬಂಧದಲ್ಲಿ ಒದಗಿಸಿರುತ್ತಾರೆ.

ಕಾರಾವಿ ಯೋ (ವೈ) ಸೇವೆಗಳು ಇಲಾಖೆಯು ವಿಮಾದಾರರಿಗೆ ಮತ್ತು ಅವರ ಕುಟುಂಬದವರಿಗೆ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸುತ್ತಿದ್ದು ಇಲಾಖೆಯು ಮಾಡುವ ವೆಚ್ಚದಲ್ಲಿ ಶೇಕಡ 87.5 ರಷ್ಟು ವೆಚ್ಚವನ್ನು ಕಾರಾವಿ ನಿಗಮವು ಭರಿಸುತ್ತಿರುವುದರಿಂದ ಹಾಗೂ

ವಿಮಾದಾರರಿಗೆ ವೈದ್ಯಕೀಯ ಸೇವೆಗಳನ್ನು ಸಮರ್ಪಕವಾಗಿ ಒದಗಿಸುವ ದೃಷ್ಟಿಯಿಂದ ಇಲಾಖೆಯಲ್ಲಿ ದಿನಾಂಕ: 1.4.2000 ದಂದು ಖಾಲಿ ಇದ್ದ ಒಟ್ಟು 1481 ಹುದ್ದೆಗಳ ಪೈಕಿ 497 ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 585 ಎಲ್ಎಸ್ಐ 2002, ಬೆಂಗಳೂರು, ದಿನಾಂಕ: 16ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈದ್ಯಕೀಯ) ಸೇವೆಗಳು ಇಲಾಖೆಯಲ್ಲಿ ದಿನಾಂಕ: 01.04.2000 ದಂದು ಖಾಲಿ ಇದ್ದ ಈ ಆದೇಶದ ಅನುಬಂಧದಲ್ಲಿ ಹೇಳಲಾದ ಒಟ್ಟು 497 (ನಾಲ್ಕುನೂರ ತೊಂಬತ್ತೇಳು) ಹುದ್ದೆಗಳನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ದಿನಾಂಕ: 01.04.2000 ರಂದು ಖಾಲಿ ಇದ್ದ ಹುದ್ದೆಗಳಲ್ಲಿ ರದ್ದುಪಡಿಲಾದ ಹುದ್ದೆಗಳ ವಿವರ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 585 ಎಲ್ಎಸ್ಐ 2002, ಬೆಂಗಳೂರು, ದಿನಾಂಕ: 16.07.2004**

**ಅನುಬಂಧ**

**1) ಶಸ್ತ್ರ ಚಿಕಿತ್ಸಕರು (15)**

| | | | | | |
|---|---|---|---|---|---|
| 1. | ಕಾರಾವಿ ಆಸ್ಪತ್ರೆ, ಶಹಬಾದ್ | 01 | 4. | ಕಾರಾವಿ ಆಸ್ಪತ್ರೆ, ದಾವಣಗೆರೆ | 04 |
| 2. | ಕಾರಾವಿ ಆಸ್ಪತ್ರೆ, ಮಂಗಳೂರು | 02 | 5. | ಕಾರಾವಿ ಆಸ್ಪತ್ರೆ, ಬೆಳಗಾಂ | 02 |
| 3. | ಕಾರಾವಿ ಆಸ್ಪತ್ರೆ, ಮೈಸೂರು | 03 | 6. | ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ | 03 |
| | | | | ಒಟ್ಟು | 15 |

**2) ಉಪಶಸ್ತ್ರ ಚಿಕಿತ್ಸಕರು (21)**

| | | | | | |
|---|---|---|---|---|---|
| 1. | ಕಾರಾವಿ ಆಸ್ಪತ್ರೆ, ಶಹಬಾದ್ | 04 | 10. | ಕಾರಾವಿ ಚಿಕಿತ್ಸಾಲಯ, ಬೋಳೂರು | 01 |
| 2. | ಕಾರಾವಿ ಚಿಕಿತ್ಸಾಲಯ, ಬಸವನಗುಡಿ | 01 | 11. | ಕಾರಾವಿ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್ | 01 |
| 3. | ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ | 01 | 12. | ಕಾರಾವಿ ಚಿಕಿತ್ಸಾಲಯ, ಕುಲಶೇಖರ | 01 |
| 4. | ಕಾರಾವಿ ಚಿಕಿತ್ಸಾಲಯ, ರಾಜಾಜಿನಗರ-1 | 01 | 13. | ಕಾರಾವಿ ಚಿಕಿತ್ಸಾಲಯ, ಸಿಟಿ ದಾವಣಗೆರೆ | 01 |
| 5. | ಕಾರಾವಿ ಚಿಕಿತ್ಸಾಲಯ, ಎನ್.ಆರ್. ಪೇಟೆ | 01 | 14. | ಕಾರಾವಿ ಚಿಕಿತ್ಸಾಲಯ, ಬಳ್ಳಾರಿ | 01 |
| 6. | ಕಾರಾವಿ ಚಿಕಿತ್ಸಾಲಯ, ಹುಬ್ಬಳ್ಳಿ-3 | 01 | 15. | ಕಾರಾವಿ ಚಿಕಿತ್ಸಾಲಯ, ಯಮುನಾಪುರ | 01 |
| 7. | ಕಾರಾವಿ ಚಿಕಿತ್ಸಾಲಯ, ಎಂ.ಎಸ್.ಕೆ. ಮಿಲ್ಸ್ | 01 | 16. | ಕಾರಾವಿ ಚಿಕಿತ್ಸಾಲಯ, ಆನಂದವಾಡಿ | 01 |
| 8. | ಕಾರಾವಿ ಚಿಕಿತ್ಸಾಲಯ, ಟೌನ್‌ಶಿಪ್ ಗುಲ್ಬರ್ಗಾ | 01 | 17. | ಕಾರಾವಿ ಚಿಕಿತ್ಸಾಲಯ, ಉದ್ಯಮ್‌ಬಾಗ್ | 01 |
| 9. | ಕಾರಾವಿ ಚಿಕಿತ್ಸಾಲಯ, ಎ.ವಿ.ಬಿ. ಶಹಬಾದ್ | 01 | 18. | ಕಾರಾವಿ ಚಿಕಿತ್ಸಾಲಯ, ಕೆ.ಬಿ. ಬಡಾವಣೆ | 01 |
| | | | | ಒಟ್ಟು | 21 |

**3) ವಿಮಾ ವೈದ್ಯಾಧಿಕಾರಿ (70)**

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 19 | 14 | ಕಾರಾವಿ ಚಿಕಿತ್ಸಾಲಯ, ಕುರಕುಂಟ | 01 |
| 2 | ಕಾರಾವಿ ಚಿಕಿತ್ಸಾಲಯ, ಬಸವನಗುಡಿ | 01 | 15 | ಕಾರಾವಿ ಚಿಕಿತ್ಸಾಲಯ, ಎ.ವಿ.ಬಿ. ಶಹಬಾದ್ | 03 |
| 3 | ಕಾರಾವಿ ಚಿಕಿತ್ಸಾಲಯ, ಮೈಸೂರು ರಸ್ತೆ | 01 | 16 | ಕಾರಾವಿ ಚಿಕಿತ್ಸಾಲಯ, ಟೌನ್‌ಶಿಪ್ ಗುಲ್ಬರ್ಗಾ | 04 |
| 4 | ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ | 02 | 17 | ಕಾರಾವಿ ಚಿಕಿತ್ಸಾಲಯ, ಉಳ್ಳಾಲ | 02 |
| 5 | ಕಾರಾವಿ ಚಿಕಿತ್ಸಾಲಯ, ಅಲಸೂರು | 01 | 18 | ಕಾರಾವಿ ಚಿಕಿತ್ಸಾಲಯ, ಬೋಳೂರು | 02 |
| 6 | ಕಾರಾವಿ ಚಿಕಿತ್ಸಾಲಯ, ಶ್ರೀರಾಂಪುರಂ | 01 | 19 | ಕಾರಾವಿ ಚಿಕಿತ್ಸಾಲಯ, ಮಲ್ಲಸಂದ್ರ | 01 |
| 7 | ಕಾರಾವಿ ಚಿಕಿತ್ಸಾಲಯ, ಕನಕಪುರ | 01 | 20 | ಕಾರಾವಿ ಚಿಕಿತ್ಸಾಲಯ, ಹೊಸಪೇಟೆ | 01 |
| 8 | ಕಾರಾವಿ ಚಿಕಿತ್ಸಾಲಯ, ಚನ್ನಪಟ್ಟಣ | 01 | 21 | ಕಾರಾವಿ ಚಿಕಿತ್ಸಾಲಯ, ಸಿಂಧಿಕುರಬೇಟ್ | 01 |
| 9 | ಕಾರಾವಿ ಚಿಕಿತ್ಸಾಲಯ, ರಾಮನಗರ | 01 | 22 | ಕಾರಾವಿ ಚಿಕಿತ್ಸಾಲಯ, ಮರಡಿಮಠ | 02 |
| 10 | ಕಾರಾವಿ ಚಿಕಿತ್ಸಾಲಯ, ಎನ್.ಆರ್.ಪೇಟೆ ದಾವಣಗೆರೆ | 01 | 23 | ಕಾರಾವಿ ಚಿಕಿತ್ಸಾಲಯ, ಹುಬ್ಬಳ್ಳಿ-3 | 02 |
| 11 | ಕಾರಾವಿ ಚಿಕಿತ್ಸಾಲಯ, ಸೋಲದೇವನಹಳ್ಳಿ | 01 | 24 | ಕಾರಾವಿ ಚಿಕಿತ್ಸಾಲಯ, ಬಿ.ಇ.ಎಂ.ಎಲ್. ನಗರ | 02 |
| 12 | ಕಾರಾವಿ ಚಿಕಿತ್ಸಾಲಯ, ಚಿಕ್ಕಜಾಲ | 01 | 25 | ಕಾರಾವಿ ಚಿಕಿತ್ಸಾಲಯ, ಉದಯಂಭಾಗ್ | 02 |
| 13 | ಕಾರಾವಿ ಚಿಕಿತ್ಸಾಲಯ, ನೆಲವಾಗಿಲು | 03 | 26 | ಕಾರಾವಿ ಚಿಕಿತ್ಸಾಲಯ, ಮಂಡ್ಯ | 01 |

| | | | | | |
|---|---|---|---|---|---|
| 27 | ಕಾರಾವಿ ಚಿಕಿತ್ಸಾಲಯ, ಅಂಡರ್‌ಸನ್‌ಪೇಟೆ | 01 | 32 | ಕಾರಾವಿ ಚಿಕಿತ್ಸಾಲಯ, ತೋಳಹುಣಸೆ | 01 |
| 28 | ಕಾರಾವಿ ಚಿಕಿತ್ಸಾಲಯ, ಆನಂದವಾಡಿ | 01 | 33 | ಕಾರಾವಿ ಚಿಕಿತ್ಸಾಲಯ, ಹುಲಿಕೋಟೆ | 01 |
| 29 | ಕಾರಾವಿ ಚಿಕಿತ್ಸಾಲಯ, ಯಮುನಾಪುರ | 01 | 34 | ಕಾರಾವಿ ಚಿಕಿತ್ಸಾಲಯ, ಹುಬ್ಬಳ್ಳಿ-2 | 01 |
| 30 | ಕಾರಾವಿ ಚಿಕಿತ್ಸಾಲಯ, ಗೋಕಾಕ್ | 01 | 35 | ಕಾರಾವಿ ಚಿಕಿತ್ಸಾಲಯ, ರಾಯಚೂರು | 01 |
| 31 | ಕಾರಾವಿ ಚಿಕಿತ್ಸಾಲಯ, ಹರಿಹರ | 02 | 36 | ಕಾರಾವಿ ಚಿಕಿತ್ಸಾಲಯ, ಸಿಟಿದಾವಣಗೆರೆ | 02 |
| | | | | ಒಟ್ಟು | 70 |

4) ಶುಶ್ರೂಷಕಾ ಅಧೀಕ್ಷಕರು, ದರ್ಜೆ - 1 (4)

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 01 | 3 | ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ | 01 |
| 2 | ಕಾರಾವಿ ಆಸ್ಪತ್ರೆ, ಬೆಳಗಾಂ | 01 | 4 | ಕಾರಾವಿ ಆಸ್ಪತ್ರೆ, ದಾವಣಗೆರೆ | 01 |
| | | | | ಒಟ್ಟು | 04 |

5) ಪ್ರಥಮ ದರ್ಜೆ ಸಹಾಯಕರು (39)

| | | | | | |
|---|---|---|---|---|---|
| 1 | ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ | 02 | 19 | ಕಾರಾವಿ ಚಿಕಿತ್ಸಾಲಯ, ಅಲಸೂರು | 01 |
| 2 | ಕಾರಾವಿ ಚಿಕಿತ್ಸಾಲಯ, ಹೊಸಪೇಟೆ | 01 | 20 | ಕಾರಾವಿ ಚಿಕಿತ್ಸಾಲಯ, ಶಹಪೂರ, ಬೆಳಗಾಂ | 01 |
| 3 | ವಿಲಿಯ್ಸಂ ಟೌನ್, ಕಾರಾವಿ ಚಿಕಿತ್ಸಾಲಯ | 01 | 21 | ಕಾರಾವಿ ಚಿಕಿತ್ಸಾಲಯ, ಬಿ.ಇ.ಎಂ.ಎಲ್.ನಗರ | 01 |
| 4 | ಕಾರಾವಿ ಚಿಕಿತ್ಸಾಲಯ, ಪಿ.ಜಿ. ಹಳ್ಳಿ | 01 | 22 | ಕಾರಾವಿ ಚಿಕಿತ್ಸಾಲಯ, ಭದ್ರಾವತಿ | 01 |
| 5 | ಕಾರಾವಿ ಚಿಕಿತ್ಸಾಲಯ, ಬೋಳೂರು | 01 | 23 | ಕಾರಾವಿ ಚಿಕಿತ್ಸಾಲಯ, ಬಸವನಗುಡಿ | 02 |
| 6 | ಕಾರಾವಿ ಚಿಕಿತ್ಸಾಲಯ, ರಸೆಲ್ ಮಾರ್ಕೆಟ್-1 | 01 | 24 | ಕಾರಾವಿ ಚಿಕಿತ್ಸಾಲಯ, ಹನುಮಂತನಗರ | 01 |
| 7 | ಕಾರಾವಿ ಚಿಕಿತ್ಸಾಲಯ, ಎ.ವಿ.ಬಿ. ಶಹಬಾದ್ | 01 | 25 | ಕಾರಾವಿ ಚಿಕಿತ್ಸಾಲಯ, ಪೀರನವಾಡಿ | 01 |
| 8 | ಕಾರಾವಿ ಚಿಕಿತ್ಸಾಲಯ, ಸಿಂಧಿಕುರ್‌ಬೇಟ್ | 01 | 26 | ಕಾರಾವಿ ಚಿಕಿತ್ಸಾಲಯ, ಕುಲಶೇಖರ | 01 |
| 9 | ಕಾರಾವಿ ಚಿಕಿತ್ಸಾಲಯ, ಶೂಲೆ | 01 | 27 | ಕಾರಾವಿ ಚಿಕಿತ್ಸಾಲಯ, ಗೋಕಾಕ್ | 01 |
| 10 | ಕಾರಾವಿ ಚಿಕಿತ್ಸಾಲಯ, ಮರಡಿಮಠ | 01 | 28 | ಕಾರಾವಿ ಚಿಕಿತ್ಸಾಲಯ, ನೆಲವಾಗಿಲು | 01 |
| 11 | ಕಾರಾವಿ ಚಿಕಿತ್ಸಾಲಯ, ಎನ್.ಆರ್. ಪೇಟೆ | 01 | 29 | ಕಾರಾವಿ ಚಿಕಿತ್ಸಾಲಯ, ಗದಗ್ | 01 |
| 12 | ಕಾರಾವಿ ಚಿಕಿತ್ಸಾಲಯ, ಚಾಮರಾಜನಗರ | 01 | 30 | ಕಾರಾವಿ ಚಿಕಿತ್ಸಾಲಯ, ಸೇಡಂ | 01 |
| 13 | ಕಾರಾವಿ ಚಿಕಿತ್ಸಾಲಯ, ರಾಯಚೂರು | 01 | 31 | ಕಾರಾವಿ ಚಿಕಿತ್ಸಾಲಯ, ಮಲ್ಖೇಡ್ | 01 |
| 14 | ಕಾರಾವಿ ಚಿಕಿತ್ಸಾಲಯ, ಪುತ್ತೂರು | 01 | 32 | ಕಾರಾವಿ ಚಿಕಿತ್ಸಾಲಯ, ಟಿ.ಬಿ. ಡ್ಯಾಂ | 01 |
| 15 | ಕಾರಾವಿ ಚಿಕಿತ್ಸಾಲಯ, ಬಳ್ಳಾರಿ | 01 | 33 | ಕಾರಾವಿ ಚಿಕಿತ್ಸಾಲಯ, ಹುಬ್ಬಳ್ಳಿ-3 | 01 |
| 16 | ಕಾರಾವಿ ಚಿಕಿತ್ಸಾಲಯ, ಬನಹಟ್ಟಿ | 01 | 34 | ಕಾರಾವಿ ಚಿಕಿತ್ಸಾಲಯ, ಮಾರತ್‌ಹಳ್ಳಿ | 01 |
| 17 | ಕಾರಾವಿ ಚಿಕಿತ್ಸಾಲಯ, ದ್ಯಾವಸಂದ್ರ | 01 | 35 | ಕಾರಾವಿ ಆಸ್ಪತ್ರೆ, ಶಹಬಾದ್ | 03 |
| 18 | ಕಾರಾವಿ ಚಿಕಿತ್ಸಾಲಯ, ಶ್ರೀರಾಂಪುರಂ | 01 | | ಒಟ್ಟು | 39 |

6) ದ್ವಿತೀಯ ದರ್ಜೆ ಸಹಾಯಕರು - 54

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 06 | 13 | ಕಾರಾವಿ ಚಿಕಿತ್ಸಾಲಯ, ಮಾಗಡಿ ರಸ್ತೆ | 02 |
| 2 | ಕಾರಾವಿ ಚಿಕಿತ್ಸಾಲಯ, ಉಳ್ಳಾಲ | 01 | 14 | ಕಾರಾವಿ ಚಿಕಿತ್ಸಾಲಯ, ರಾಮನಗರ | 01 |
| 3 | ಕಾರಾವಿ ಚಿಕಿತ್ಸಾಲಯ, ಬೋಳಾರ್ | 01 | 15 | ಕಾರಾವಿ ಚಿಕಿತ್ಸಾಲಯ, ಶೇಷಾದ್ರಿಪುರಂ | 01 |
| 4 | ಕಾರಾವಿ ಚಿಕಿತ್ಸಾಲಯ, ಮಾಚೀನಹಳ್ಳಿ | 01 | 16 | ಕಾರಾವಿ ಚಿಕಿತ್ಸಾಲಯ, ಶ್ರೀರಾಂಪುರಂ | 02 |
| 5 | ಕಾರಾವಿ ಚಿಕಿತ್ಸಾಲಯ, ವಿಲಿಯಮ್ಸ್‌ಟೌನ್ | 01 | 17 | ಕಾರಾವಿ ಚಿಕಿತ್ಸಾಲಯ, ವಿವೇಕನಗರ | 01 |
| 6 | ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ | 05 | 18 | ಕಾರಾವಿ ಚಿಕಿತ್ಸಾಲಯ, ಕೊತ್ವಾಲಗಲ್ಲಿ | 01 |
| 7 | ಕಾರಾವಿ ಚಿಕಿತ್ಸಾಲಯ, ಪಿ.ಜಿ. ಹಳ್ಳಿ | 01 | 19 | ಕಾರಾವಿ ಚಿಕಿತ್ಸಾಲಯ, ಬಿಜಾಪುರ | 01 |
| 8 | ಕಾರಾವಿ ಚಿಕಿತ್ಸಾಲಯ, ರಸೆಲ್ ಮಾರ್ಕೆಟ್-1 | 03 | 20 | ಕಾರಾವಿ ಚಿಕಿತ್ಸಾಲಯ, ಕೆ.ಬಿ. ಬಡಾವಣೆ | 01 |
| 9 | ಕಾರಾವಿ ಚಿಕಿತ್ಸಾಲಯ, ಎ.ವಿ.ಬಿ. ಶಹಬಾದ್ | 02 | 21 | ಕಾರಾವಿ ಚಿಕಿತ್ಸಾಲಯ, ಚಿಕ್ಕಜಾಲ | 01 |
| 10 | ಕಾರಾವಿ ಚಿಕಿತ್ಸಾಲಯ, ಶೂಲೆ | 02 | 22 | ಕಾರಾವಿ ಚಿಕಿತ್ಸಾಲಯ, ಹುಬ್ಬಳ್ಳಿ-2 | 02 |
| 11 | ಕಾರಾವಿ ಚಿಕಿತ್ಸಾಲಯ, ಬಂಗಾರುಪೇಟೆ | 01 | 23 | ಕಾರಾವಿ ಚಿಕಿತ್ಸಾಲಯ, ಶಹಬಾದ್‌ಟೌನ್ | 01 |
| 12 | ಕಾರಾವಿ ಚಿಕಿತ್ಸಾಲಯ, ಫ್ರೇಜರ್‌ಟೌನ್ | 02 | 24 | ಕಾರಾವಿ ಚಿಕಿತ್ಸಾಲಯ, ನೆಲವಾಗಿಲು | 01 |

| | | | | | |
|---|---|---|---|---|---|
| 25 | ಕಾರಾವಿ ಚಿಕಿತ್ಸಾಲಯ, ಕುರುಕುಂಟ | 02 | 31 | ಕಾರಾವಿ ಚಿಕಿತ್ಸಾಲಯ, ಕುಲಶೇಖರ | 01 |
| 26 | ಕಾರಾವಿ ಚಿಕಿತ್ಸಾಲಯ, ಮಲ್ಖೇಡ್ | 01 | 32 | ಕಾರಾವಿ ಚಿಕಿತ್ಸಾಲಯ, ಉಡುಪಿ | 01 |
| 27 | ಕಾರಾವಿ ಚಿಕಿತ್ಸಾಲಯ, ಹಾಸನ | 01 | 33 | ಕಾರಾವಿ ಚಿಕಿತ್ಸಾಲಯ, ಪೆಣಂಬೂರು | 01 |
| 28 | ಕಾರಾವಿ ಚಿಕಿತ್ಸಾಲಯ, ಕೊಳ್ಳೇಗಾಲ | 01 | 34 | ಕಾರಾವಿ ಚಿಕಿತ್ಸಾಲಯ, ಸೋಲದೇವನಹಳ್ಳಿ | 01 |
| 29 | ಕಾರಾವಿ ಚಿಕಿತ್ಸಾಲಯ, ಮದ್ದೂರು | 01 | 35 | ಕಾರಾವಿ ಚಿಕಿತ್ಸಾಲಯ, ಪುತ್ತೂರು | 01 |
| 30 | ಕಾರಾವಿ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್ | 01 | 36 | ಕಾರಾವಿ ಚಿಕಿತ್ಸಾಲಯ, ಜಿಗಣಿ | 01 |
| | | | | ಒಟ್ಟು | 54 |

7) ಶೀಘ್ರಲಿಪಿಗಾರರು - 01

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 01 | | | |

8) ಬೆರಳಚ್ಚುಗಾರರು - 01

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 01 | | | |

9) ಹಿರಿಯ ಪ್ರ. ಶಾಲಾ ತಂತ್ರಜ್ಞರು - 04

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಇಂದಿರಾನಗರ | 03 | 2 | ಕಾರಾವಿ ಆಸ್ಪತ್ರೆ, ದಾವಣಗೆರೆ | 01 |
| | | | | ಒಟ್ಟು | 04 |

10) ಕಿರಿಯ ಪ್ರ. ಶಾಲಾ ತಂತ್ರಜ್ಞರು - 36

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 03 | 16 | ಕಾರಾವಿ ಚಿಕಿತ್ಸಾಲಯ, ಹುಣಸೂರು | 01 |
| 2 | ಕಾರಾವಿ ಚಿಕಿತ್ಸಾಲಯ, ಬೊಮ್ಮಸಂದ್ರ | 01 | 17 | ಕಾರಾವಿ ಚಿಕಿತ್ಸಾಲಯ, ಸಿಟಿ ದಾವಣಗೆರೆ | 01 |
| 3 | ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ | 01 | 18 | ಕಾರಾವಿ ಚಿಕಿತ್ಸಾಲಯ, ಮಂಡ್ಯ | 01 |
| 4 | ಕಾರಾವಿ ಚಿಕಿತ್ಸಾಲಯ, ಬೊಮ್ಮನಹಳ್ಳಿ | 01 | 19 | ಕಾರಾವಿ ಚಿಕಿತ್ಸಾಲಯ, ಕರಂಗಲ್‌ಪಾಡಿ | 02 |
| 5 | ಕಾರಾವಿ ಚಿಕಿತ್ಸಾಲಯ, ಚನ್ನಪಟ್ಟಣ | 01 | 20 | ಕಾರಾವಿ ಚಿಕಿತ್ಸಾಲಯ, ರಾಯಚೂರು | 01 |
| 6 | ಕಾರಾವಿ ಚಿಕಿತ್ಸಾಲಯ, ಸುಬ್ರಮಣ್ಯಪುರ | 01 | 21 | ಕಾರಾವಿ ಚಿಕಿತ್ಸಾಲಯ, ಶಿವಮೊಗ್ಗ | 01 |
| 7 | ಕಾರಾವಿ ಚಿಕಿತ್ಸಾಲಯ, ಅಲಸೂರು | 01 | 22 | ಕಾರಾವಿ ಚಿಕಿತ್ಸಾಲಯ, ಶಹಬಾದ್‌ಟೌನ್ | 01 |
| 8 | ಕಾರಾವಿ ಚಿಕಿತ್ಸಾಲಯ, ಪೀಣ್ಯ | 01 | 23 | ಕಾರಾವಿ ಚಿಕಿತ್ಸಾಲಯ, ನಂಜನಗೂಡು-1 | 01 |
| 9 | ಕಾರಾವಿ ಚಿಕಿತ್ಸಾಲಯ, ಯಶವಂತಪುರ | 01 | 24 | ಕಾರಾವಿ ಚಿಕಿತ್ಸಾಲಯ, ಬಸವನಗುಡಿ | 01 |
| 10 | ಕಾರಾವಿ ಚಿಕಿತ್ಸಾಲಯ, ರಸಲ್‌ಮಾರ್ಕೆಟ್-1 | 01 | 25 | ಕಾರಾವಿ ಚಿಕಿತ್ಸಾಲಯ, ರಾಜಾಜಿನಗರ-1 | 01 |
| 11 | ಕಾರಾವಿ ಚಿಕಿತ್ಸಾಲಯ, ಯಲಹಂಕ | 01 | 26 | ಕಾರಾವಿ ಚಿಕಿತ್ಸಾಲಯ, ಮಾಗಡಿರಸ್ತೆ | 01 |
| 12 | ಕಾರಾವಿ ಚಿಕಿತ್ಸಾಲಯ, ಬಳ್ಳಾರಿ | 01 | 27 | ಕಾರಾವಿ ಆಸ್ಪತ್ರೆ, ಮಂಗಳೂರು | 03 |
| 13 | ಕಾರಾವಿ ಚಿಕಿತ್ಸಾಲಯ, ಟಿ.ಬಿ. ಡ್ಯಾಂ | 01 | 28 | ಕಾರಾವಿ ಆಸ್ಪತ್ರೆ, ದಾಂಡೇಲಿ | 01 |
| 14 | ಕಾರಾವಿ ಚಿಕಿತ್ಸಾಲಯ, ಮೈಸೂರು ದಕ್ಷಿಣ | 01 | 29 | ಕಾರಾವಿ ಆಸ್ಪತ್ರೆ, ಮೈಸೂರು | 02 |
| 15 | ಕಾರಾವಿ ಚಿಕಿತ್ಸಾಲಯ, ಎನ್‌ಆರ್ ಮೊಹಲ್ಲಾ | 01 | 30 | ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ | 01 |
| | | | | ಒಟ್ಟು | 36 |

11) ಕ್ಷ-ಕಿರಣ ತಂತ್ರಜ್ಞರು - 01

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 01 | | | |
| | ಒಟ್ಟು | 01 | | | |

12) ಡೆಂಟಲ್ ಟೆಕ್ನಿಷಿಯನ್ - 02

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 01 | 2 | ಕಾರಾವಿ ಆಸ್ಪತ್ರೆ, ಬೆಳಗಾಂ | 01 |
| | | | | ಒಟ್ಟು | 02 |

13) ಎಲೆಕ್ಟ್ರೀಷಿಯನ್ - 05

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಮೈಸೂರು | 01 | 4 | ಕಾರಾವಿ ಆಸ್ಪತ್ರೆ, ಶಹಬಾದ್ | 01 |
| 2 | ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ | 01 | 5 | ಕಾರಾವಿ ಆಸ್ಪತ್ರೆ, ಬೆಳಗಾಂ | 01 |
| 3 | ಕಾರಾವಿ ಆಸ್ಪತ್ರೆ, ಮಂಗಳೂರು | 01 | | ಒಟ್ಟು | 05 |

14) ಇ.ಸಿ.ಜಿ. ತಂತ್ರಜ್ಞರು - 08

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಇಂದಿರಾನಗರ | 03 | 4 | ಕಾರಾವಿ ಆಸ್ಪತ್ರೆ, ಶಹಬಾದ್ | 01 |
| 2 | ಕಾರಾವಿ ಆಸ್ಪತ್ರೆ, ಮೈಸೂರು | 01 | 5 | ಕಾರಾವಿ ಆಸ್ಪತ್ರೆ, ಬೆಳಗಾಂ | 01 |
| 3 | ಕಾರಾವಿ ಆಸ್ಪತ್ರೆ, ಮಂಗಳೂರು | 01 | 6 | ಕಾರಾವಿ ಆಸ್ಪತ್ರೆ, ದಾವಣಗೆರೆ | 01 |
| | | | | ಒಟ್ಟು | 08 |

15) ಫಿಜಿಯೋಥೆರಪಿಸ್ಟ್ - 03

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಇಂದಿರಾನಗರ | 01 | 3 | ಕಾರಾವಿ ಆಸ್ಪತ್ರೆ, ದಾಂಡೇಲಿ | 01 |
| 2 | ಕಾರಾವಿ ಆಸ್ಪತ್ರೆ, ಶಹಬಾದ್ | 01 | | ಒಟ್ಟು | 03 |

16) ವೈದ್ಯಕೀಯ ಸಮಾಜ ಸೇವಾ ಕಾರ್ಯಕರ್ತರು - 02

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 01 | | | |
| 2 | ಕಾರಾವಿ ಆಸ್ಪತ್ರೆ, ಬೆಳಗಾಂ | 01 | | | |
| | ಒಟ್ಟು | 02 | | | |

17) ಆಡಿಯೋ ಮೀಟರಿಸ್ಟ್ - 01

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಇಂದಿರಾನಗರ | 01 | | | |

18) ಸ್ಟೀವರ್ಡ್ - 01

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಮಂಗಳೂರು | 01 | | | |

19) ಆಕ್ಯುಪೇಷನಲ್ ಥೆರಪಿಸ್ಟ್ - 01

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಇಂದಿರಾನಗರ | 01 | | | |

20) ಫಾರ್ಮಾಸಿಸ್ಟ್ - 56

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 03 | 17 | ಕಾರಾವಿ ಚಿಕಿತ್ಸಾಲಯ, ಯಶವಂತಪುರ | 01 |
| 2 | ಕಾರಾವಿ ಚಿಕಿತ್ಸಾಲಯ, ಬೋಳಾರ್ | 03 | 18 | ಕಾರಾವಿ ಚಿಕಿತ್ಸಾಲಯ, ಜಿಗಣಿ | 02 |
| 3 | ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ | 06 | 19 | ಕಾರಾವಿ ಚಿಕಿತ್ಸಾಲಯ, ಶಹಪುರ್ | 01 |
| 4 | ಕಾರಾವಿ ಚಿಕಿತ್ಸಾಲಯ, ಮಲ್ಲಸಂದ್ರ | 01 | 20 | ಕಾರಾವಿ ಚಿಕಿತ್ಸಾಲಯ, ಉದ್ಯಮಾಬಾದ್ | 01 |
| 5 | ಕಾರಾವಿ ಚಿಕಿತ್ಸಾಲಯ, ಹೊಸಪೇಟೆ | 01 | 21 | ಕಾರಾವಿ ಚಿಕಿತ್ಸಾಲಯ, ಕೊತ್ವಾಲಗಲ್ಲಿ | 01 |
| 6 | ಕಾರಾವಿ ಚಿಕಿತ್ಸಾಲಯ, ರಸಲ್‌ಮಾರ್ಕೆಟ್-1 | 02 | 22 | ಕಾರಾವಿ ಚಿಕಿತ್ಸಾಲಯ, ಟಿ.ಬಿ. ಡ್ಯಾಂ | 01 |
| 7 | ಕಾರಾವಿ ಚಿಕಿತ್ಸಾಲಯ, ಎ.ವಿ.ಬಿ. ಶಹಬಾದ್ | 02 | 23 | ಕಾರಾವಿ ಚಿಕಿತ್ಸಾಲಯ, ಕೆ.ಬಿ. ಬಡಾವಣೆ | 03 |
| 8 | ಕಾರಾವಿ ಚಿಕಿತ್ಸಾಲಯ, ಟೌನ್‌ಶಿಪ್ ಶಹಬಾದ್ | 02 | 24 | ಕಾರಾವಿ ಚಿಕಿತ್ಸಾಲಯ, ಎನ್.ಆರ್.ಪೇಟೆ, ದಾವಣಗೆರೆ | 02 |
| 9 | ಕಾರಾವಿ ಚಿಕಿತ್ಸಾಲಯ, ಶೂಲೆ | 02 | 25 | ಕಾರಾವಿ ಚಿಕಿತ್ಸಾಲಯ, ಸಿಟಿ ದಾವಣಗೆರೆ | 03 |
| 10 | ಕಾರಾವಿ ಚಿಕಿತ್ಸಾಲಯ, ಮರಡಿಮಠ್ | 01 | 26 | ಕಾರಾವಿ ಚಿಕಿತ್ಸಾಲಯ, ನೆಲವಾಗಿಲು | 02 |
| 11 | ಕಾರಾವಿ ಚಿಕಿತ್ಸಾಲಯ, ಕನಕಪುರ | 01 | 27 | ಕಾರಾವಿ ಚಿಕಿತ್ಸಾಲಯ, ಹುಲಿಕೋಟೆ | 01 |
| 12 | ಕಾರಾವಿ ಚಿಕಿತ್ಸಾಲಯ, ಟಿ. ನರಸೀಪುರ | 01 | 28 | ಕಾರಾವಿ ಚಿಕಿತ್ಸಾಲಯ, ಕುರುಕುಂಟ | 01 |
| 13 | ಕಾರಾವಿ ಚಿಕಿತ್ಸಾಲಯ, ಕಾಟನ್‌ಪೇಟೆ | 01 | 29 | ಕಾರಾವಿ ಚಿಕಿತ್ಸಾಲಯ, ಮಾರ್ಗನ್ಸ್‌ಗೇಟ್ | 02 |
| 14 | ಕಾರಾವಿ ಚಿಕಿತ್ಸಾಲಯ, ಮಾಗಡಿರಸ್ತೆ | 01 | 30 | ಕಾರಾವಿ ಚಿಕಿತ್ಸಾಲಯ, ಕುಲಶೇಖರ | 01 |
| 15 | ಕಾರಾವಿ ಚಿಕಿತ್ಸಾಲಯ, ಶ್ರೀರಾಂಪುರಂ | 02 | 31 | ಕಾರಾವಿ ಚಿಕಿತ್ಸಾಲಯ, ಉಲ್ಲಾಳ | 01 |
| 16 | ಕಾರಾವಿ ಚಿಕಿತ್ಸಾಲಯ, ಅಲಸೂರು | 03 | 32 | ಕಾರಾವಿ ಚಿಕಿತ್ಸಾಲಯ, ಬಿಇಎಂಎಲ್ ನಗರ | 01 |
| | | | | ಒಟ್ಟು | 56 |

21) ಶುಶ್ರೂಷಕಿಯರು - 42

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 19 | 6 | ಕಾರಾವಿ ಚಿಕಿತ್ಸಾಲಯ, ಕುರುಕುಂಟ | 02 |
| 2 | ಕಾರಾವಿ ಚಿಕಿತ್ಸಾಲಯ, ಬೋಳಾರ್ | 02 | 7 | ಕಾರಾವಿ ಚಿಕಿತ್ಸಾಲಯ, ವಾಡಿ | 01 |
| 3 | ಕಾರಾವಿ ಚಿಕಿತ್ಸಾಲಯ, ರಾಯಚೂರು | 01 | 8 | ಕಾರಾವಿ ಚಿಕಿತ್ಸಾಲಯ, ಸೇಡಂ | 01 |
| 4 | ಕಾರಾವಿ ಚಿಕಿತ್ಸಾಲಯ, ಸೋಲದೇವನಹಳ್ಳಿ | 01 | 9 | ಕಾರಾವಿ ಚಿಕಿತ್ಸಾಲಯ, ಎ.ವಿ.ಬಿ. ಶಹಬಾದ್ | 01 |
| 5 | ಕಾರಾವಿ ಚಿಕಿತ್ಸಾಲಯ, ಚಿಕ್ಕಜಾಲ | 01 | 10 | ಕಾರಾವಿ ಚಿಕಿತ್ಸಾಲಯ, ಹರಿಹರ | 01 |

| | | | | | |
|---|---|---|---|---|---|
| 11 | ಕಾರಾವಿ ಚಿಕಿತ್ಸಾಲಯ, ಪೀರನ್‌ವಾಡಿ | 01 | 17 | ಕಾರಾವಿ ಚಿಕಿತ್ಸಾಲಯ, ಮಲ್ಲಸಂದ್ರ | 01 |
| 12 | ಕಾರಾವಿ ಚಿಕಿತ್ಸಾಲಯ, ಅಲಸೂರು | 02 | 18 | ಕಾರಾವಿ ಚಿಕಿತ್ಸಾಲಯ, ಕೆಂಗೇರಿ | 01 |
| 13 | ಕಾರಾವಿ ಚಿಕಿತ್ಸಾಲಯ, ಮಾರತ್‌ಹಳ್ಳಿ | 01 | 19 | ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ | 01 |
| 14 | ಕಾರಾವಿ ಚಿಕಿತ್ಸಾಲಯ, ಫ್ರೇಜರ್ ಟೌನ್ | 01 | 20 | ಕಾರಾವಿ ಚಿಕಿತ್ಸಾಲಯ, ಚೆನ್ನಪಟ್ಟಣ | 01 |
| 15 | ಕಾರಾವಿ ಚಿಕಿತ್ಸಾಲಯ, ಬೊಮ್ಮಸಂದ್ರ | 01 | 21 | ಕಾರಾವಿ ಚಿಕಿತ್ಸಾಲಯ, ಕೊಳ್ಳೇಗಾಲ | 01 |
| 16 | ಕಾರಾವಿ ಚಿಕಿತ್ಸಾಲಯ, ಬಸವನಗುಡಿ | 01 | | ಒಟ್ಟು | 42 |

22) ಎ.ಎನ್.ಎಂ. - 14

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಶಹಬಾದ್ | 03 | 6 | ಕಾರಾವಿ ಚಿಕಿತ್ಸಾಲಯ, ಧಾರವಾಡ | 01 |
| 2 | ಕಾರಾವಿ ಆಸ್ಪತ್ರೆ, ಬೆಳಗಾಂ | 02 | 7 | ಕಾರಾವಿ ಚಿಕಿತ್ಸಾಲಯ, ರಾಬರ್ಟ್‌ಸನ್‌ಪೇಟೆ | 01 |
| 3 | ಕಾರಾವಿ ಆಸ್ಪತ್ರೆ, ದಾಂಡೇಲಿ | 02 | 8 | ಕಾರಾವಿ ಚಿಕಿತ್ಸಾಲಯ, ಬಿಇಎಂಎಲ್ ನಗರ | 01 |
| 4 | ಕಾರಾವಿ ಚಿಕಿತ್ಸಾಲಯ, ಮಂಡ್ಯ | 01 | 9 | ಕಾರಾವಿ ಚಿಕಿತ್ಸಾಲಯ, ಕೊಳ್ಳೇಗಾಲ | 01 |
| 5 | ಕಾರಾವಿ ಚಿಕಿತ್ಸಾಲಯ, ಹುಲಿಕೋಟೆ | 01 | 10 | ಕಾರಾವಿ ಚಿಕಿತ್ಸಾಲಯ, ಟಿ. ನರಸೀಪುರ | 01 |
| | | | | ಒಟ್ಟು | 14 |

23) ಶುಶ್ರೂಷಕರ ಅಧೀಕ್ಷಕರ ದರ್ಜೆ-2 - 20

| | | | | | |
|---|---|---|---|---|---|
| 1 | ಕಾರಾವಿ ಆಸ್ಪತ್ರೆ, ಇಂದಿರಾನಗರ | 10 | 4 | ಕಾರಾವಿ ಆಸ್ಪತ್ರೆ, ಮಂಗಳೂರು | 03 |
| 2 | ಕಾರಾವಿ ಆಸ್ಪತ್ರೆ, ಶಹಬಾದ್ | 03 | 5 | ಕಾರಾವಿ ಆಸ್ಪತ್ರೆ, ಬೆಳಗಾಂ | 02 |
| 3 | ಕಾರಾವಿ ಆಸ್ಪತ್ರೆ, ಮೈಸೂರು | 02 | | ಒಟ್ಟು | 20 |
| | | | | | |

24) ವಾಹನ ಚಾಲಕರು - 6

| | | | | | |
|---|---|---|---|---|---|
| 1 | ಕಾರಾವಿ ನಿರ್ದೇಶನಾಲಯ | 01 | 3 | ಕಾರಾವಿ ಆಸ್ಪತ್ರೆ, ಶಹಬಾದ್ | 02 |
| 2 | ಕಾರಾವಿ ಆಸ್ಪತ್ರೆ, ಮೈಸೂರು | 02 | 4 | ಕಾರಾವಿ ಆಸ್ಪತ್ರೆ, ಬೆಳಗಾಂ | 01 |
| | | | | ಒಟ್ಟು | 06 |

25) ಗ್ರೂಪ್ 'ಡಿ' - 90

| | | | | | |
|---|---|---|---|---|---|
| 1 | ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ | 02 | 20 | ಕಾರಾವಿ ಚಿಕಿತ್ಸಾಲಯ, ಟಿ.ಬಿ. ಡ್ಯಾಂ | 02 |
| 2 | ಕಾರಾವಿ ಚಿಕಿತ್ಸಾಲಯ, ದಾಸರಹಳ್ಳಿ | 01 | 21 | ಕಾರಾವಿ ಚಿಕಿತ್ಸಾಲಯ, ಸಿಟಿ ದಾವಣಗೆರೆ | 01 |
| 3 | ಕಾರಾವಿ ಚಿಕಿತ್ಸಾಲಯ, ವಿಜಯನಗರ | 01 | 22 | ಕಾರಾವಿ ಚಿಕಿತ್ಸಾಲಯ, ಹರಿಹರ | 01 |
| 4 | ಕಾರಾವಿ ಚಿಕಿತ್ಸಾಲಯ, ಮೈಸೂರು ರಸ್ತೆ | 01 | 23 | ಕಾರಾವಿ ಚಿಕಿತ್ಸಾಲಯ, ನೆಲವಾಗಿಲು | 01 |
| 5 | ಕಾರಾವಿ ಚಿಕಿತ್ಸಾಲಯ, ಪಿ.ಜಿ.ಹಳ್ಳಿ | 01 | 24 | ಕಾರಾವಿ ಚಿಕಿತ್ಸಾಲಯ, ಗದಗ್ | 01 |
| 6 | ಕಾರಾವಿ ಚಿಕಿತ್ಸಾಲಯ, ಶೇಷಾದ್ರಿಪುರಂ | 01 | 25 | ಕಾರಾವಿ ಚಿಕಿತ್ಸಾಲಯ, ಮಂಡ್ಯ | 03 |
| 7 | ಕಾರಾವಿ ಚಿಕಿತ್ಸಾಲಯ, ಶೂಲೆ | 01 | 26 | ಕಾರಾವಿ ಚಿಕಿತ್ಸಾಲಯ, ಎವಿಬಿ ಶಹಬಾದ್ | 02 |
| 8 | ಕಾರಾವಿ ಚಿಕಿತ್ಸಾಲಯ, ಸೋಲದೇವನಹಳ್ಳಿ | 03 | 27 | ಕಾರಾವಿ ಚಿಕಿತ್ಸಾಲಯ, ಮೈಸೂರು ಕೇಂದ್ರ | 02 |
| 9 | ಕಾರಾವಿ ಚಿಕಿತ್ಸಾಲಯ, ವಿಲಿಯಮ್ಸ್‌ಟೌನ್ | 01 | 28 | ಕಾರಾವಿ ಚಿಕಿತ್ಸಾಲಯ, ಎನ್‌ಆರ್ ಮೊಹಲ್ಲಾ | 03 |
| 10 | ಕಾರಾವಿ ಚಿಕಿತ್ಸಾಲಯ, ಚನ್ನಪಟ್ಟಣ | 02 | 29 | ಕಾರಾವಿ ಚಿಕಿತ್ಸಾಲಯ, ವಿ.ವಿ.ಪುರಂ ಮೈಸೂರು | 01 |
| 11 | ಕಾರಾವಿ ಚಿಕಿತ್ಸಾಲಯ, ನೆಲಮಂಗಲ | 01 | 29ಎ | ಕಾರಾವಿ ಚಿಕಿತ್ಸಾಲಯ, ಹುಣಸೂರು | 01 |
| 12 | ಕಾರಾವಿ ಚಿಕಿತ್ಸಾಲಯ, ಜಿಗಣಿ | 04 | 30 | ಕಾರಾವಿ ಚಿಕಿತ್ಸಾಲಯ, ನಂಜನಗೂಡು-1 | 01 |
| 13 | ಕಾರಾವಿ ಚಿಕಿತ್ಸಾಲಯ, ಶಹಾಪುರ್, ಬೆಳಗಾಂ | 01 | 31 | ಕಾರಾವಿ ಚಿಕಿತ್ಸಾಲಯ, ಟಿ. ನರಸೀಪುರ | 02 |
| 14 | ಕಾರಾವಿ ಚಿಕಿತ್ಸಾಲಯ, ಯಮುನಾಪುರ | 01 | 32 | ಕಾರಾವಿ ಚಿಕಿತ್ಸಾಲಯ, ಬೆಳವಾಡಿ | 01 |
| 15 | ಕಾರಾವಿ ಚಿಕಿತ್ಸಾಲಯ, ಸಿಂಧಿಕುರ್‌ಬೇಟ್ | 01 | 33 | ಕಾರಾವಿ ಚಿಕಿತ್ಸಾಲಯ, ಚಾಮರಾಜನಗರ | 01 |
| 16 | ಕಾರಾವಿ ಚಿಕಿತ್ಸಾಲಯ, ಮರಡಿಮಠ್ | 01 | 34 | ಕಾರಾವಿ ಚಿಕಿತ್ಸಾಲಯ, ಕರಂಗಲ್‌ಪಾಡಿ | 01 |
| 17 | ಕಾರಾವಿ ಚಿಕಿತ್ಸಾಲಯ, ಬಾಗಲಕೋಟೆ | 02 | 35 | ಕಾರಾವಿ ಚಿಕಿತ್ಸಾಲಯ, ಕುಲಶೇಖರ | 02 |
| 18 | ಕಾರಾವಿ ಚಿಕಿತ್ಸಾಲಯ, ಬಳ್ಳಾರಿ | 01 | 36 | ಕಾರಾವಿ ಚಿಕಿತ್ಸಾಲಯ, ಉಲ್ಲಾಳ | 01 |
| 19 | ಕಾರಾವಿ ಚಿಕಿತ್ಸಾಲಯ, ಹೊಸಪೇಟೆ | 01 | 37 | ಕಾರಾವಿ ಚಿಕಿತ್ಸಾಲಯ, ಮಣಿಪಾಲ್ | 01 |

| | | | | | |
|---|---|---|---|---|---|
| 38 | ಕಾರಾವಿ ಚಿಕಿತ್ಸಾಲಯ, ಪಣಂಬೂರ್ | 01 | 43 | ಕಾರಾವಿ ಆಸ್ಪತ್ರೆ, ಬೆಳಗಾಂ (ಲ್ಯಾಬ್ ಅಸಿಸ್ಟೆಂಟ್) | 03 |
| 39 | ಕಾರಾವಿ ಚಿಕಿತ್ಸಾಲಯ, ತುಮಕೂರ್ | 02 | 44 | ಕಾರಾವಿ ಆಸ್ಪತ್ರೆ, ಶಹಬಾದ್ | 10 (ಕುಕ್-ಇಲ್ಯಾಬ್ ಅಸಿಸ್ಟೆಂಟ್-3) |
| 40 | ಕಾರಾವಿ ಆಸ್ಪತ್ರೆ, ಇಂದಿರಾನಗರ | 05 | 45 | ಕಾರಾವಿ ಆಸ್ಪತ್ರೆ, ದಾವಣಗೆರೆ | 02 |
| 41 | ಕಾರಾವಿ ಆಸ್ಪತ್ರೆ, ಮೈಸೂರು | 04 | 46 | ಕಾರಾವಿ ನಿರ್ದೇಶನಾಲಯ | 05 |
| 42 | ಕಾರಾವಿ ಆಸ್ಪತ್ರೆ, ಮಂಗಳೂರು | 01 | 47 | ಕಾರಾವಿ ಚಿಕಿತ್ಸಾಲಯ, ಅಲಸೂರು | 02 |
| | | | | ಒಟ್ಟು | 90 |

**ಹೆಚ್. ವಿಶ್ವನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 782 ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಮುನಿಶಾಮಯ್ಯ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ - ಅಧಿಕಾರಿ ಮೃತರಾಗಿರುವುದರಿಂದ ದಂಡನೆಯನ್ನು ಕೈಬಿಟ್ಟು ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಕ್ರಮಾಂಕ: ಸಿಆಸುಇ 37 ಎಸ್‌ಇಎನ್ 2002, ದಿನಾಂಕ: 18.4.2004.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 37 ಎಸ್‌ಇಎನ್ 2002, ದಿನಾಂಕ: 21.12.2002.
3. ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ರವರ ದಿನಾಂಕ: 28.5.2003ರ ವಿಚಾರಣಾ ವರದಿ.
4. ಶ್ರೀ ಮುನಿಶಾಮಯ್ಯನವರ ದಿನಾಂಕ: 6.12.2003ರ ಮರಣ ಪ್ರಮಾಣ ಪತ್ರ.

**ಪ್ರಸ್ತಾವನೆ:**

ಶ್ರೀ ಮುನಿಶಾಮಯ್ಯ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ರವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 303 ಆಸೇಇ 2000, ದಿನಾಂಕ: 24.8.2000 ದಲ್ಲಿ ಅವರಿಗೆ ಮಂಜೂರಾದ ಕಂಪ್ಯೂಟರ್ ಮುಂಗಡ 50 ಸಾವಿರ ರೂಪಾಯಿಗಳಲ್ಲಿ ನಿಗದಿತ ಅವಧಿಯಲ್ಲಿ ಕಂಪ್ಯೂಟರ್ ಖರೀದಿಸದೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 419 ಆಸೇಇ 2000, ದಿನಾಂಕ: 20.10.2000 ದಲ್ಲಿ ಮಂಜೂರಾದ ಕಾರು ಮುಂಗಡದ ಹಣದಿಂದ ಕಾರು ಖರೀದಿಸದೇ ಮುಂಗಡ ಹಣವನ್ನು ದುರ್ಬಳಕೆ ಮಾಡಿಕೊಂಡ ಆರೋಪಕ್ಕಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 18.4.2002 ನೋಟೀಸ್ ಜಾರಿ ಮಾಡುವ ಮೂಲಕ ವಿಚಾರಣೆಯನ್ನು ಪ್ರಾರಂಭಿಸಲಾಯಿತು ಹಾಗೂ ಮೇಲೆ (2) ರಲ್ಲಿ ಓದಲಾದ ದಿನಾಂಕ: 21-12.2002ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು. ಶ್ರೀ ಎಂ.ಎಸ್. ನಟರಾಜಮೂರ್ತಿಯವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 28.5.2003ರ ವಿಚಾರಣಾ ವರದಿಯನ್ನು ಸಲ್ಲಿಸಿ, ಅಪಾದಿತರು ಯಾವ ಉದ್ದೇಶಕ್ಕಾಗಿ ಹಣವನ್ನು ಸರ್ಕಾರದಿಂದ ಪಡೆದಿದ್ದರೋ ಅದಕ್ಕೆ ಉಪಯೋಗಿಸದೆ, ದುರ್ವಿನಿಯೋಗಪಡಿಸಿಕೊಂಡಿರುವುದು ಸಾಕ್ಷ್ಯಾಧಾರಗಳಿಂದ ತಿಳಿದು ಬರುತ್ತವೆ ಎಂದು ನಿರ್ಣಯಿಸಿ ಅಪಾದಿತರು ತಪ್ಪು ಮಾಡಿರುವುದು ರುಜುವಾತಾಗಿದೆ ಎಂದು ತೀರ್ಮಾನಿಸಿ ತೀರ್ಪನ್ನಿತ್ತಿದ್ದಾರೆ.

ಈ ಬಗ್ಗೆ ಪ್ರಕರಣವನ್ನು ಸರ್ಕಾರವು ಪರಿಶೀಲಿಸಿ 2ನೇ ನೋಟೀಸ್ ಹೊರಡಿಸಿ ಅಪಾದಿತರ ಹೇಳಿಕೆ ಪಡೆಯುವಷ್ಟರಲ್ಲಿ ಶ್ರೀಯುತ ಮುನಿಶಾಮಯ್ಯ ದಿನಾಂಕ: 30.11.2003 ರಂದು ಮೃತ ಪಟ್ಟಿರುವುದು ಬೆಂಗಳೂರು ಮಹಾನಗರ ಪಾಲಿಕೆಯು ದಿನಾಂಕ: 6.12.2003 ರಂದು ನೀಡಿರುವ ಮರಣ ಪ್ರಮಾಣ ಪತ್ರದಿಂದ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಅವರ ವಿರುದ್ಧ ಉದ್ದೇಶಿತ ದಂಡನಾ ಪ್ರಕ್ರಿಯೆಯನ್ನು ಕೈಬಿಡಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 37 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 2ನೇ ಜುಲೈ 2004**

ಆರೋಪಿತ ಅಧಿಕಾರಿಯಾದ ಶ್ರೀ ಮುನಿಶಾಮಯ್ಯ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರು ದಿನಾಂಕ: 30.11.2003 ರಂದು ನಿಧನ ಹೊಂದಿರುವುದರಿಂದ ಅವರ ವಿರುದ್ಧ ನಡೆಸಲಾದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು, ಮುಕ್ತಾಯಗೊಳಿಸಲಾಗಿದೆ. ವಿಚಾರಣೆ ನಡೆಯದಿದ್ದಲ್ಲಿ, ಇವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ, ಅವನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 749 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಸೈಯದ್ ಖಾಜಿಮ್ ಅಲಿ, ಪ್ರಾಂಶುಪಾಲರು, ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜು, ಬೀದರ್ ಇವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ ಕಾಯ್ದಿರಿಸಿ, ಅಮಾನತ್ತಿನಲ್ಲಿಡುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಪೂ ಶಿಇ: ಎಫ್‌ಎಫ್: 011: ಪರೀಕ್ಷಾ ದುರಾಚರಣೆ: 2003-04 ದಿನಾಂಕ: 25.10.2003.

**ಪ್ರಸ್ತಾವನೆ:**

ಶ್ರೀ ಸೈಯದ್ ಖಾಜಿಮ್ ಆಲಿ, ಪ್ರಾಂಶುಪಾಲರು, ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜು ಬೀದರ್ ಇವರು ಕೆಳಕಂಡ ಆರೋಪ ಎಸಗಲು ಕಾರಣಗಾರಿದ್ದರೆಂದು ಮೇಲೆ ಓದಲಾದ ದಿನಾಂಕ 25.10.2003 ರಂದು ಪದವಿಪೂರ್ವ ಶಿಕ್ಷಣ ಇಲಾಖಾ ನಿರ್ದೇಶಕರು ಸರ್ಕಾರದ ಗಮನಕ್ಕೆ ತಂದಿದ್ದಾರೆ.

1. ದ್ವಿತೀಯ ವರ್ಷದ ಪಿ.ಯು.ಸಿ. ಗೆ ಸಂಬಂಧಿಸಿದಂತೆ ನಿರ್ದೇಶನಾಲಯವು ಸುತ್ತೋಲೆಯನ್ನು ಹೊರಡಿಸಿ ವಿದ್ಯಾರ್ಥಿಗಳ ಪ್ರವೇಶಪತ್ರ ನೀಡುವ ಬಗ್ಗೆ ಅನುಸರಿಸಬೇಕಾದ ಸೂಚನೆಯನ್ನು ಕಟ್ಟುನಿಟ್ಟಾಗಿ ಪಾಲಿಸುವ ಬಗ್ಗೆ ಕಾಲೇಜಿನ ಪ್ರಾಂಶುಪಾಲರಿಗೆ ತಿಳುವಳಿಕೆ ನೀಡಲಾಗಿದೆಯೆಂದೂ, ಸುತ್ತೋಲೆಯಂತೆ ವಿದ್ಯಾರ್ಥಿಗಳ ಪ್ರವೇಶ ಪತ್ರಗಳನ್ನು ಕಳುಹಿಸುವಾಗ, ಪ್ರವೇಶ ಪತ್ರದ ಮೇಲೆ ವಿದ್ಯಾರ್ಥಿಯ ಎರಡು ಫೋಟೋಗಳನ್ನು ನಿಗದಿತ ಜಾಗಗಳಲ್ಲಿ ಅಂಟಿಸಿ, ಎರಡೂ ಕಡೆಗಳಲ್ಲಿ ಅಭ್ಯರ್ಥಿಯ ಸಹಿ ಪಡೆದು ಪ್ರಾಂಶುಪಾಲರು ರುಜು ಮಾಡುವುದರ ಜೊತೆಗೆ ಅಭ್ಯರ್ಥಿಯ ಫೋಟೋ ಮೇಲೆ ಪ್ರಾಂಶುಪಾಲರು ಖುದ್ದಾಗಿ ಸಹಿ ಮಾಡಬೇಕೆಂದು ಸೂಚನೆಯಿದ್ದು, ಒಮ್ಮೆ ಅಭ್ಯರ್ಥಿಗಳು ಮೂಲ ಪ್ರವೇಶಪತ್ರ ಕಳೆದುಕೊಂಡಲ್ಲಿ ಈ ಬಗ್ಗೆ ಪರಿಶೀಲಿಸಿ ಅಭ್ಯರ್ಥಿಯು ಪರೀಕ್ಷಾ ದುರಾಚರಣೆ ಇತ್ಯಾದಿಗಳಲ್ಲಿ ಸಿಲುಕದಿರುವುದನ್ನು ಖಚಿತ ಪಡಿಸಿಕೊಂಡು ಅವರಿಗೆ ದ್ವಿಪ್ರತಿ ಪ್ರವೇಶಪತ್ರ ನೀಡಲು ಪ್ರಾಂಶುಪಾಲರಿಗೆ ಅಧಿಕಾರ ನೀಡಲಾಗಿದೆಯೆಂದೂ, ಆದರೆ 2003ರ ಅಕ್ಟೋಬರ್ ಪರೀಕ್ಷೆಗೆ ಬೀದರ್‌ನಲ್ಲಿರುವ ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜು ಪರೀಕ್ಷಾ ಕೇಂದ್ರವಾಗಿದ್ದು, ಈ ಪರೀಕ್ಷಾ ಕೇಂದ್ರಕ್ಕೆ ಅದೇ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಸೈಯದ್ ಖಾಜಿಮ ಆಲಿ, ಇವರನ್ನು ಪರೀಕ್ಷಾ ಕೇಂದ್ರದ ಮುಖ್ಯ ಅಧೀಕ್ಷಕರನ್ನಾಗಿ ನೇಮಕ ಮಾಡಲಾಗಿತ್ತೆಂದೂ, ಸದರಿಯವರು ಪರೀಕ್ಷೆಗೆ ಸಂಬಂಧಿಸಿದ ಎಲ್ಲಾ ನಿಯಮಗಳನ್ನು ಗಾಳಿಗೆ ತೂರಿ, ಮೂಲ ವಿದ್ಯಾರ್ಥಿಗಳ ಬದಲಾಗಿ, 5 ನಕಲಿ ವಿದ್ಯಾರ್ಥಿಗಳು ಪರೀಕ್ಷೆಗೆ ಬರೆಯುತ್ತಿರುವುದು ದಿನಾಂಕ: 8.10.2003 ರಂದು ಕನ್ನಡ ಭಾಷೆ ಪರೀಕ್ಷೆ ನಡೆಯುತ್ತಿದ್ದ ಸಮಯದಲ್ಲಿ ಜಾಗೃತ ದಳದವರು ಪರೀಕ್ಷಾ ಕೇಂದ್ರಕ್ಕೆ ಭೇಟಿ ನೀಡಿ ತನಿಖೆ ಮಾಡಿದಾಗ ಬೆಳಕಿಗೆ ಬಂದಿದೆಯೆಂದು ತಿಳಿಸಿದ್ದಾರೆ.

2. ಪ್ರಾಂಶುಪಾಲರಾದ ಶ್ರೀ ಸೈಯದ್ ಖಾಜಿಮ ಆಲಿ, ಇವರು ಅದೇ ಕಾಲೇಜಿನ ಐದು ವಿದ್ಯಾರ್ಥಿಗಳ ಮೂಲ ಪ್ರವೇಶ ಪತ್ರಗಳನ್ನು ವಿತರಿಸದೇ, ನಕಲಿ ಪ್ರವೇಶಪತ್ರಗಳನ್ನು ಉದ್ದೇಶಪೂರ್ವಕವಾಗಿ ತಯಾರಿಸಿ, ನೈಜ ವಿದ್ಯಾರ್ಥಿಗಳ ಬದಲಾಗಿ, ನಕಲಿ ವಿದ್ಯಾರ್ಥಿಗಳಿಗೆ ಪರೀಕ್ಷೆ ಬರೆಯಲು ಅನುವು ಮಾಡಿಕೊಡುವ ಮೂಲಕ ವಿದ್ಯಾರ್ಥಿಗಳೊಂದಿಗೆ ನೇರವಾಗಿ ಶಾಮೀಲಾಗಿ ಪರೀಕ್ಷಾ ನಿಯಮಗಳನ್ನು ಉಲ್ಲಂಘಿಸಿ ಪರೀಕ್ಷಾ ಕಾರ್ಯಕ್ಕೆ ಚ್ಯುತಿ ತರಲು ಕಾರಣರಾಗುವ ಮೂಲಕ ಗುರುತರವಾದ ಆರೋಪ ಎಸಗಲು ಕಾರಣರಾಗಿದ್ದಾರೆಂದು ನಿರ್ದೇಶಕರು ವರದಿಯಲ್ಲಿ ತಿಳಿಸಿದೆ.

ಶ್ರೀ ಸೈಯದ್ ಖಾಜಿಮ ಆಲಿ, ಪ್ರಾಂಶುಪಾಲರು ಇವರು ಪರೀಕ್ಷಾ ಅವ್ಯವಹಾರದಲ್ಲಿ ನೇರವಾಗಿ ಮೇಲ್ನೋಟಕ್ಕೆ ಬಾಗಿಯಾಗಿರುವುದು ಪದವಿಪೂರ್ವ ಶಿಕ್ಷಣ ಇಲಾಖಾ ನಿರ್ದೇಶಕರ ವರದಿಯಿಂದ ಕಂಡುಬಂದಿದೆ. ಪ್ರಾಂಶುಪಾಲರು ಐದು ನಕಲಿ ವಿದ್ಯಾರ್ಥಿಗಳನ್ನು ಸೃಷ್ಟಿಸಿ ಪರೀಕ್ಷೆ ಬರೆಯಲು ಅವಕಾಶ ನೀಡಿರುವುದು ಪರೀಕ್ಷಾ ನಿಯಮಗಳಿಗೆ ವಿರುದ್ಧವಾಗಿರುವುದಲ್ಲದೇ, ಪರೀಕ್ಷಾ ಪಾವಿತ್ರತೆಯನ್ನು ಕಾಯ್ದುಕೊಂಡು ಹೋಗಲು ಅವರು ವಿಫಲರಾಗಿರುವುದು ಕಂಡುಬಂದಿದೆ. ಶ್ರೀ ಸೈಯದ್ ಖಾಜಿಮ ಆಲಿ, ಇವರು ಗ್ರೂಪ್-ಎ, ವೃಂದದ ಅಧಿಕಾರಿಯಾಗಿ ಸರ್ಕಾರದ ನಿಯಮಗಳನ್ನು ಪಾಲಿಸುವ ಬದಲು, ಪರೀಕ್ಷಾ ಅವ್ಯವಹಾರದಲ್ಲಿ ಬಾಗಿಯಾಗಿರುವ ಮೂಲಕ ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ, ಗುರುತರ ಆರೋಪಕ್ಕೆ ನೇರವಾಗಿ ಹೊಣೆಗಾರರಾಗಿದ್ದರಿಂದ, ಸದರಿಯವರನ್ನು ಪ್ರಾಂಶುಪಾಲರ ಹುದ್ದೆಯಲ್ಲಿ ಮುಂದುವರಿಸುವುದು ಸೂಕ್ತವಲ್ಲವೆಂದು ಸರ್ಕಾರವು ನಿರ್ಧರಿಸಿ, ಅವರನ್ನು ಅಮಾನತ್ತಿನಲ್ಲಿಡುವುದು ಉಚಿತವೆಂದು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 194 ಡಿಜಿಡಿ 2003, ಬೆಂಗಳೂರು, ದಿನಾಂಕ: 9ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10 (1)(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಶ್ರೀ ಸೈಯದ್ ಖಾಜಿಮ್ ಆಲಿ, ಪ್ರಾಂಶುಪಾಲರು, ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜು, ಬೀದರ್ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಶಿಸ್ತುಕ್ರಮ ಬಾಕಿಯಿರಿಸಿ, ಅಮಾನತ್ತಿನಲ್ಲಿಟ್ಟು ಆದೇಶಿಸಿದೆ. ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೇ ಇವರು ಕೇಂದ್ರಸ್ಥಾನ ಬಿಡತಕ್ಕದ್ದಲ್ಲ. ನಿಯಮಾನುಸಾರ ಇವರು ಜೀವನಾಧಾರಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್. 750 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

**ಸಹಕಾರ ಸಚಿವಾಲಯ**

**ವಿಷಯ:** ಸಹಕಾರಿ ಕಲ್ಯಾಣ ನಿಧಿಯ ಸಲುವಾಗಿ ಸಂಗ್ರಹಿಸಲಾಗಿರುವ ಮೊಬಲಗನ್ನು ಯಶಸ್ವಿನಿ ಯೋಜನೆಯ ಉಪಯೋಗಕ್ಕೆ ತೆಗೆದುಕೊಳ್ಳಲು ಅನುಮತಿ ನೀಡುವ ಕುರಿತು.

**ಓದಲಾಗಿದೆ:** ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇದರ ದಿನಾಂಕ: 01.04.2003 ರಿಂದ 31.03.2004ರ ವರೆಗಿನ ವಿವರಣೆಯ ತಃಖ್ತೆ ಅಕೌಂಟ್ ನಂ.12123 ಮತ್ತು ಪತ್ರಸಂಖ್ಯೆ: ಉಪ್ರವ್ಯ:ಪ್ರಕಶಾ: 1733:2004-05, ದಿನಾಂಕ: 19.06.2004.

**ಪ್ರಸ್ತಾವನೆ:**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಅನ್ನು ಕರ್ನಾಟಕ ಕಾಯ್ದೆ ನಂ.25:1998ರ ಮೂಲಕ ತಿದ್ದುಪಡಿ ಮಾಡಿದ್ದು ಸದರಿ ತಿದ್ದುಪಡಿಗಳು ದಿನಾಂಕ: 15.08.1998 ರಿಂದ ಜಾರಿಗೆ ಬಂದಿರುತ್ತದೆ. ಸದರಿ ತಿದ್ದುಪಡಿ ಕಾಯ್ದೆ ಪ್ರಕಾರ ಕಲಂ 57(2ಎ) ಮತ್ತು (2ಬಿ)

ಅನ್ನು ಸೇರಿಸಿ ಪ್ರತಿ ಸಹಕಾರ ಸಂಘವೂ ತನ್ನ ಲಾಭದಿಂದ ಶೇಕಡಾ 5 ರಷ್ಟನ್ನು ಸರ್ಕಾರವು ರಚಿಸುವ ಸಹಕಾರ ಕಲ್ಯಾಣ ನಿಧಿಗೆ ಪಾವತಿಸತಕ್ಕದ್ದು ಎಂದು ವಿಧಿಸಲಾಗಿತ್ತು.

ರಿಟ್ ಅರ್ಜಿ ಸಂಖ್ಯೆ: 4197-4294/1999 ರಲ್ಲಿ ಸದರಿ ಕಾಯ್ದೆ ತಿದ್ದುಪಡಿಯನ್ನು ಪ್ರಶ್ನಿಸಿದ್ದು ಅದರಲ್ಲಿ ಕಲಂ 57 (2ಎ) ಮತ್ತು (2ಬಿ) ಗಳು ಕೂಡ ಸೇರಿರುತ್ತವೆ, ದಿನಾಂಕ: 14.03.2001 ರಂದು ಶ್ರೇಷ್ಠ ನ್ಯಾಯಾಲಯವು ನೀಡಿರುವ ತೀರ್ಪಿನಲ್ಲಿ ಕಲಂ 57(2ಎ) ಮತ್ತು (2ಬಿ) ಗಳನ್ನು ಅಸಂವೈಧಾನಿಕ (Unconstitutional) ಮತ್ತು ಪರಿಚ್ಛೇದ 14 ಮತ್ತು 19(1)(ಜಿ) ಗಳಿಗೆ ವಿರುದ್ದವಾಗಿದೆ ಎಂದು ಆದೇಶಿಸಲಾಗಿದೆ. ಸದರಿ ತೀರ್ಪನ್ನು ಪ್ರಶ್ನಿಸಿ ಸರ್ಕಾರವು ಸಲ್ಲಿಸಿದ್ದ ರಿಟ್ ಅಪೀಲು ಸಂಖ್ಯೆ: 1899-1912/2001 ರಲ್ಲಿ ಶ್ರೇಷ್ಠ ನ್ಯಾಯಾಲಯದ ವಿಭಾಗೀಯ ಪೀಠವು ಕಾಯ್ದೆ ಕಲಂ 57(2ಎ) ಮತ್ತು (2ಬಿ) ಗಳು ಸಹಕಾರಿ ಕಲ್ಯಾಣ ನಿಧಿ ರಚನೆಗೆ ಸಂಬಂಧಪಟ್ಟಂತೆ ಅಸಂವೈಧಾನಿಕ ಎಂದು ಆದೇಶಿಸಿದೆ.

"In the light of the above dissusion. We hold that section 57(2-A) and (2-B) in so far as they provide for constitution of Sahakara Kalyana Nidhi and contributions to be made by the Cooperative Socities towards that Nidhi are ultravires the Constitution and therefore declared invalid and unenforceable"

ಶ್ರೇಷ್ಠ ನ್ಯಾಯಾಲಯದ ತೀರ್ಪನ್ನು ಅನುಸರಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಅನ್ನು ಕರ್ನಾಟಕ ಕಾಯ್ದೆ ಸಂಖ್ಯೆ: 13/2004ರ ಮೂಲಕ ತಿದ್ದುಪಡಿ ಮಾಡಿ ಸಹಕಾರ ಕಲ್ಯಾಣ ನಿಧಿಯ ರಚನೆಯನ್ನು ಕೈಬಿಟ್ಟು ಕಲಂ 57(2ಎ) ಮತ್ತು (2ಬಿ) ಗಳಿಗೆ ಸೂಕ್ತ ತಿದ್ದುಪಡಿ ಮಾಡಿದ್ದು ಸದರಿ ತಿದ್ದುಪಡಿಯು ದಿನಾಂಕ: 22.03.2004 ರಿಂದ ಜಾರಿಗೆ ಬಂದಿರುತ್ತದೆ.

ಈ ಮಧ್ಯೆ ಸದರಿ ತಿದ್ದುಪಡಿ ಕಾಯ್ದೆಯಂತೆ ಸಹಕಾರಿ ಕಲ್ಯಾಣ ನಿಧಿಯ ಸಲುವಾಗಿ ವಿವಿಧ ಸಹಕಾರ ಸಂಘಗಳು ತಮ್ಮ ಲಾಭದಿಂದ ತೆಗೆದಿರಿಸಿದ ಹಣವನ್ನು ಅಪೆಕ್ಸ್ ಬ್ಯಾಂಕಿನಲ್ಲಿ ಠೇವಣಿಸಲಾಗಿದೆ. ಈ ನಿಧಿಯಲ್ಲಿ ದಿನಾಂಕ: 31.03.2004ಕ್ಕೆ ರೂ.2,62,421,51 ಹಾಗೂ ರೂ.76,18,052.50 ಎರಡು ಸೇರಿ ಒಟ್ಟು ರೂ.78.80,474,01 (ಎಪ್ಪತ್ತೆಂಟು ಲಕ್ಷದ ಎಂಬತ್ತು ಸಾವಿರದ ನಾಲ್ಕುನೂರ ಎಪ್ಪತ್ತನಾಲ್ಕು ರೂಪಾಯಿ ಹಾಗೂ ಒಂದು ಪೈಸೆ ಮಾತ್ರ) ಮೊಬಲಗು ಇರುತ್ತದೆ.

ದಿನಾಂಕ: 01.06.2003 ರಿಂದ ರಾಜ್ಯದಲ್ಲಿ ಯಶಸ್ವಿನಿ ರೈತರ ಆರೋಗ್ಯ ರಕ್ಷಣಾ ಯೋಜನೆಯು ಜಾರಿಗೆ ಬಂದಿದ್ದು ಇದು ರಾಜ್ಯದ ರೈತರ ಹಿತದೃಷ್ಟಿಯಿಂದ ಜಾರಿಯಾಗುತ್ತಿದೆ. ಆರೋಗ್ಯ ರಕ್ಷಣಾ ಯೋಜನೆಯು ಹೆಚ್ಚಿನ ರೈತರಿಗೆ ಅನುಕೂಲವಾಗುವಂತೆ ಅನುಷ್ಠಾನಗೊಳಿಸಲು ಹೆಚ್ಚಿನ ಹಣದ ಅವಕಾಶ ಇರುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ಸಹಕಾರಿ ಕಲ್ಯಾಣ ನಿಧಿಯ ಸಲುವಾಗಿ ಸಂಗ್ರಹಿಸಲಾಗಿರುವ ಮೊಬಲಗನ್ನು ಯಶಸ್ವಿನಿ ಯೋಜನೆಯ ಉಪಯೋಗಕ್ಕೆ ತೆಗೆದುಕೊಳ್ಳಬಹುದೆಂದು ಅಭಿಪ್ರಾಯ ಪಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 40 ಸಿಎಲ್ಎಸ್ 2004, ಬೆಂಗಳೂರು, ದಿನಾಂಕ: 8ನೇ ಜುಲೈ 2004**

ಮೇಲೆ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 57(2ಎ) ರಂತೆ ಸಹಕಾರಿ ಕಲ್ಯಾಣ ನಿಧಿಯ ಸಲುವಾಗಿ ವಿವಿಧ ಸಹಕಾರ ಸಂಘಗಳು ಅಪೆಕ್ಸ್ ಬ್ಯಾಂಕಿನಲ್ಲಿ ಠೇವಣಿಸಿ ದಿನಾಂಕ: 31.03.2004ರ ಅಂತ್ಯಕ್ಕೆ ಉಳಿತಾಯ ಖಾತೆಯಲ್ಲಿರುವ ರೂ.2,62,421.51 (ರೂ. ಎರಡು ಲಕ್ಷ ಅರವತ್ತೆರಡು ಸಾವಿರದ ನಾಲ್ಕುನೂರ ಇಪ್ಪತ್ತೊಂದು ಮತ್ತು ಐವತ್ತೊಂದು ಪೈಸೆಗಳು ಮಾತ್ರ) ಗಳು ಹಾಗೂ ಸಹಕಾರ ಕಲ್ಯಾಣ ನಿಧಿ ಹೆಸರಿನಲ್ಲಿ ಇರುವ ಎರಡು ಡಿ.ಜೆ.ಜೆ. ನಿಶ್ಚಿತ ಠೇವಣಿಗಳೂ ಸೇರಿದಂತೆ

| ಕ್ರ.ಸಂ. | ರಸೀದಿ ಸಂಖ್ಯೆ | ಮೊಬಲಗು | ತೊಡಗಿಸಲಾದ ದಿನಾಂಕ | ಪಕ್ವಗೊಳ್ಳಲಿರುವ ದಿನಾಂಕ |
|---|---|---|---|---|
| 01 | 1510 | 41,78,052-50 | 11.09.2003 | 11.09.2004 |
| 02 | 1511 | 34,40,000-00 | 09.10.2003 | 09.10.2004 |
| | **ರೂ.** | **76,18,052-50** | | |

ಒಟ್ಟು ಮೊಬಲಗು ರೂ.78,80,474.01 (ರೂ.2,62,421.51 + ರೂ.76,18,052.50) ಗಳನ್ನು ದಿನಾಂಕ: 01.06.2003 ರಿಂದ ರಾಜ್ಯದಲ್ಲಿ ಜಾರಿಗೆ ಬಂದಿರುವ ಯಶಸ್ವಿನಿ ರೈತರ ಆರೋಗ್ಯ ರಕ್ಷಣಾ ಯೋಜನೆಯ ನಿಧಿಗೆ ವರ್ಗಾಯಿಸಲು ಅನುಮತಿ ನೀಡಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿ.ಆರ್. 751

**ಕಾರ್ಮಿಕ ಸಚಿವಾಲಯ**

**ವಿಷಯ:** ಡಾ: ಎಸ್. ವಿಜಯಕುಮಾರ್, ವಿಮಾ ವೈದ್ಯಾಧಿಕಾರಿ, ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ, ಬೆಂಗಳೂರು, ಇವರ ಅನಧಿಕೃತ ಗೈರುಹಾಜರಿ - ಸೇವೆಯಿಂದ ತೆಗೆದುಹಾಕುವ ದಂಡನೆ ವಿಧಿಸುವ ಬಗ್ಗೆ

**ಓದಲಾಗಿದೆ:**
1. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ದೂರು.150:97-98, ದಿ: 16.3.98.
2. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 302 ಎಲ್ಎಸ್ಐ 98, ದಿನಾಂಕ: 10.7.98.
3. ಸರ್ಕಾರದ ಆದೇಶ ಸಂಖ್ಯೆ: ಕಾಇ 302 ಎಲ್ಎಸ್ಐ 98, ದಿನಾಂಕ: 12.7.99.
4. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿ: 3.5.01 ನಿರ್ದೇಶಕರ ಪತ್ರ ಸಂಖ್ಯೆ: ಇವಿ:150:97-98, ದಿನಾಂಕ: 6.6.2001.
5. ಸರ್ಕಾರದ 2ನೇ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 302 ಎಲ್ಎಸ್ಐ 98, ದಿನಾಂಕ: 26.4.2002.

6. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು, ಇವರ ಪತ್ರ ಸಂಖ್ಯೆ: ಇಎಸ್‌ಐಎಸ್:ಇವಿ:150:97-98, ದಿನಾಂಕ: 16.6.2003 ಮತ್ತು 17.4.2004.
7. ದಿನಾಂಕ: 18.10.2003ರ ಈ ಸಂಜೆ ದಿನ ಪತ್ರಿಕೆಯಲ್ಲಿ ನೀಡಲಾದ ಪತ್ರಿಕಾ ಪ್ರಕಟಣೆ.

**ಪ್ರಸ್ತಾವನೆ:**

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಮೇಲೆ (1) ರಲ್ಲಿ ಓದಲಾದ ದಿನಾಂಕ: 16.3.98ರ ತಮ್ಮ ಪತ್ರದಲ್ಲಿ ಡಾ: ಎಸ್. ವಿಜಯಕುಮಾರ್, ವಿಮಾ ವೈದ್ಯಾಧಿಕಾರಿಗಳು, ಕಾರಾವಿ ಚಿಕಿತ್ಸಾಲಯ, ಬಿನ್ನಿಪೇಟೆ ಇವರನ್ನು ಕಾರಾವಿ ಆಸ್ಪತ್ರೆ, ಇಂದಿರಾನಗರಕ್ಕೆ ಎರವಲು ಸೇವೆ ಮೇರೆಗೆ ನೇಮಿಸಲಾಗಿದ್ದು, ಸದರಿಯವರು ದಿನಾಂಕ: 1.8.97 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದಾಗಿ ತಿಳಿಸುತ್ತಾ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವಂತೆ ಕೋರಿ ಕರಡು ದೋಷಾರೋಪಣ ಪಟ್ಟಿಯನ್ನು ರೂಪಿಸಿ ಸಲ್ಲಿಸಿದ್ದರು. ಸದರಿ ವೈದ್ಯರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (2) ರಲ್ಲಿ ಓದಲಾದ ನೋಟೀಸ್‌ನೊಂದಿಗೆ, ದೋಷಾರೋಪಣೆ ಪಟ್ಟಿಯನ್ನು ಜಾರಿ ಮಾಡಿ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಡಾ: ಎಸ್. ವಿಜಯಕುಮಾರ್, ವಿಮಾ ವೈದ್ಯಾಧಿಕಾರಿ, ಇವರಿಂದ ಯಾವುದೇ ರಕ್ಷಣಾ ಹೇಳಿಕೆ ಬರದಿದ್ದ ಕಾರಣ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಾ: ದಾಕ್ಷಾಯಿಣಿ, ಶಸ್ತ್ರ ಚಿಕಿತ್ಸಕರು, ಕಾರಾವಿ ಆಸ್ಪತ್ರೆ, ರಾಜಾಜಿನಗರ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶ್ರೀ ಚಂದ್ರಶೇಖರ್, ಕಛೇರಿ ಅಧೀಕ್ಷಕರು, ಕಾರಾವಿ ಆಸ್ಪತ್ರೆ, ರಾಜಾಜಿನಗರ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ (4) ರಲ್ಲಿ ಓದಲಾದ ತಮ್ಮ ವರದಿಯಲ್ಲಿ ಡಾ: ಎಸ್. ವಿಜಯಕುಮಾರ್ ಇವರಿಗೆ ಇಲಾಖಾ ವಿಚಾರಣೆಗೆ ಹಾಜರಾಗುವಂತೆ ಸೂಚಿಸಿ ಕಳುಹಿಸಲಾದ ನೋಟೀಸುಗಳು ಅವರಿಗೆ ಬಟವಾಡೆಯಾಗದೆ ಹಿಂದಿರುಗಿ ಬಂದಿರುವುದಾಗಿಯೂ ಆದ್ದರಿಂದ ಲಭ್ಯವಿರುವ ದಾಖಲೆಗಳು ಹಾಗೂ ಸಾಕ್ಷಿಗಳ ವಿಚಾರಣೆಯಿಂದಾಗಿ ಆರೋಪಿತ ವೈದ್ಯರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯಪಟ್ಟಿರುತ್ತಾರೆ. ವಿಚಾರಣಾ ವರದಿಯ ಪ್ರತಿಯನ್ನು ಮೇಲೆ (5) ರಲ್ಲಿ ಓದಲಾದ ದಿನಾಂಕ: 26.4.2002ರ ನೋಟೀಸ್‌ನೊಂದಿಗೆ ವಿಚಾರಣಾ ವರದಿಯಲ್ಲಿನ ಅಂಶಗಳನ್ನು 'ಏಕೆ ಒಪ್ಪಿಕೊಳ್ಳಬಾರದೆಂಬ' ಬಗ್ಗೆ ತಮ್ಮ ಅಹವಾಲೇನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಿ ಡಾ: ಎಸ್. ವಿಜಯಕುಮಾರ್, ವಿಮಾ ವೈದ್ಯಾಧಿಕಾರಿ, ಇವರ ಇತ್ತೀಚಿನ ವಿಳಾಸಕ್ಕೆ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಮೂಲಕ ಕಳುಹಿಸಲಾಗಿತ್ತು.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಮೇಲೆ (6) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ: ಎಸ್. ವಿಜಯಕುಮಾರ್, ವಿಮಾ ವೈದ್ಯಾಧಿಕಾರಿ, ಇವರು ಸರ್ಕಾರದಿಂದ ಕಳುಹಿಸಲಾದ 2ನೇ ಷೋಕಾಸ್ ನೋಟೀಸ್ ಪಡೆದಿಲ್ಲವಾದ್ದರಿಂದ ಲಕೋಟೆಯು ಬಟವಾಡೆಯಾಗದೆ 'ನಾಟ್ ಕ್ಲೈಮ್ಡ್' ಎನ್ನುವ ಷರಾದೊಡನೇ ಹಿಂತಿರುಗಿ ಬಂದಿರುವುದಾಗಿ ಹಾಗೂ ಮೇಲೆ (6) ರಲ್ಲಿ ಓದಲಾದ ದಿನಾಂಕ: 17.4.2004ರ ಪತ್ರದಲ್ಲಿ 2ನೇ ಷೋಕಾಸ್ ನೋಟೀಸನ್ನು ದಿನಾಂಕ: 18.10.2003ರ ಕನ್ನಡ ದಿನ ಪತ್ರಿಕೆ 'ಈ ಸಂಜೆ' ಯಲ್ಲಿ ಪ್ರಕಟಿಸಿರುವುದಾಗಿಯೂ ತಿಳಿಸಿರುತ್ತಾರೆ. ಎರಡನೇ ಷೋಕಾಸ್ ನೋಟೀಸ್‌ನ್ನು ದಿನಾಂಕ: 18.10.2003ರ ಈ ಸಂಜೆ ಕನ್ನಡ ದಿನ ಪತ್ರಿಕೆಯಲ್ಲಿ ಪ್ರಕಟಿಸಿದ್ದರೂ ಸಹ ಸದರಿ ವೈದ್ಯರಿಂದ ಈ ಬಗ್ಗೆ ಯಾವುದೇ ಹೇಳಿಕೆ ಸ್ವೀಕೃತವಾಗಿಲ್ಲ.

ಈ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 302 ಎಲ್‌ಎಸ್‌ಐ 98, ಬೆಂಗಳೂರು, ದಿನಾಂಕ: 13ನೇ ಜುಲೈ 2004**

ಡಾ: ಎಸ್. ವಿಜಯಕುಮಾರ್, ವಿಮಾ ವೈದ್ಯಾಧಿಕಾರಿ, ಕಾರ್ಮಿಕ ರಾಜ್ಯ ವಿಮಾ ಚಿಕಿತ್ಸಾಲಯ, ಬಿನ್ನಿಪೇಟೆ, ಬೆಂಗಳೂರು ಇವರು ದಿನಾಂಕ: 1.8.97 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು ಇವರ ವಿರುದ್ಧ ಮಾಡಲಾದ ಗೈರುಹಾಜರಾತಿಯ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii) ರನ್ವಯ ಇವರಿಗೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ. ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ್**

ಪಿ.ಆರ್. 753 ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

**ವಿಷಯ:** ಡಾ.ಎಂ.ರಾಜೇಶ್ವರಿ, ವಿಮಾ ವೈದ್ಯಾಧಿಕಾರಿ, ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ ಇ ವರ ಅನಧಿಕೃತ ಗೈರು ಹಾಜರಾತಿ - ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇ ವರ ಪತ್ರ ಸಂಖ್ಯೆ:ಇ ವಿ:88:2000-01, ದಿ:3.5.2001.
2. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 120 ಎಲ್‌ಎಸ್‌ಐ 2001, ದಿನಾಂಕ:08-05-2002.
3. ಡಾ.ಎಂ.ರಾಜೇಶ್ವರಿ, ವಿಮಾ ವೈದ್ಯಾಧಿಕಾರಿ, ಇ ವರ ರಕ್ಷಣಾ ಹೇಳಿಕೆ ದಿನಾಂಕ:12-06-2002.
4. ಡಾ.ರಾಜೇಶ್ವರಿ ಇ ವರು ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡುವಂತೆ ಕೋರಿ ದಿನಾಂಕ:16.08.2002 ರಂದು ಸಲ್ಲಿಸಿದ ಮನವಿ.
5. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 420 ಎಲ್‌ಎಸ್‌ಐ 2001, ದಿನಾಂಕ:07-10-2002.
6. ಸರ್ಕಾರದ ಆದೇಶ ಸಂಖ್ಯೆ: ಕಾಇ 420 ಎಲ್‌ಎಸ್‌ಐ 2001, ದಿನಾಂಕ:06-09-2003.
7. ವಿಚಾರಣಾಧಿಕಾರಿಗಳ ವರದಿ ದಿನಾಂಕ: 04-12-2003.

8. ಸರ್ಕಾರದ ಎರಡನೇ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 420 ಎಲ್‌ಎಸ್‌ಐ 2001, ದಿ:06.03.2004.
9. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇ ವರ ಪತ್ರ ಸಂಖ್ಯೆ:ಇ ಎಸ್‌ಐಎಸ್:ಇ ವಿ:30:03-04, ದಿನಾಂಕ:27-02-2004.
10. ಡಾ.ಎಂ.ರಾಜೇಶ್ವರಿ, ಇ ವರು ಸಲ್ಲಿಸಿರುವ ರಕ್ಷಣಾ ಹೇಳಿಕೆ ದಿ:26-04-2004.

ಪ್ರಸ್ತಾವನೆ:

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇ ವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ, ಡಾ.ಎಂ.ರಾಜೇಶ್ವರಿ, ವಿಮಾ ವೈದ್ಯಾಧಿಕಾರಿ, ಇ ವರು ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ, ಬೆಂಗಳೂರು ಇ ಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:08-07-2000ದಿಂದ ದಿನಾಂಕ:05-10-2000ದವರೆಗೆ ಹಾಗೂ ಪುನ: ದಿನಾಂಕ:06-10-2000 ದಿಂದ 03-01-2001ರವರೆಗೆ ರಜೆ ಮಂಜೂರಾತಿ ಕೋರಿ ರಜೆ ಅರ್ಜಿ ಸಲ್ಲಿಸಿದ್ದು ರಜೆ ಮಂಜೂರು ಮಾಡಿಸಿಕೊಳ್ಳದೆ ಹಾಗೂ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದರೆಂದೂ ಇ ವರ ಗೈರು ಹಾಜರಾತಿಯಿಂದ ವಿಮಾ ರೋಗಿಗಳಿಗೆ ಹಾಗೂ ಅವರ ಕುಟುಂಬದವರಿಗೆ ಉಂಟಾಗಿರುವ ತೊಂದರೆಯನ್ನು ಗಮನಿಸಿ ದಿನಾಂಕ:18:20-10-2000, 21:22-11-2000 ಮತ್ತು 13-12-2000ಗಳಂದು ಮೂರು ಬಾರಿ ಸೂಚನಾ ಪತ್ರಗಳನ್ನು ನೋಂದಾಯಿತ ಅಂಚೆ ಸ್ವೀಕೃತಿಯೊಂದಿಗೆ ವೈದ್ಯರ ಇ ತ್ತೀಚಿನ ವಿಳಾಸಕ್ಕೆ ರವಾನಿಸಿ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಯಿತೆಂದೂ ಆದರೆ ಡಾ.ಎಂ.ರಾಜೇಶ್ವರಿ, ವಿಮಾ ವೈದ್ಯಾಧಿಕಾರಿ ಇ ವರು ಕರ್ತವ್ಯಕ್ಕೆ ಹಾಜರಾಗದೇ ತಮ್ಮ ಮೇಲಧಿಕಾರಿಗಳ ಆದೇಶಗಳನ್ನು ಸ್ಪಷ್ಟವಾಗಿ ಉಲ್ಲಂಘಿ ಸಿರುವುದಾಗಿ ತಿಳಿಸಿ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮಗಳ ಪ್ರಕಾರ ಶಿಸ್ತು ಕ್ರಮ ಕೈಗೊಳ್ಳಲು ಕೋರಿ ಕರಡು ದೋಷಾರೋಪಣೆ ಪಟ್ಟಿಯನ್ನು ರೂಪಿಸಿ ಸಲ್ಲಿಸಿದ್ದರು.

ಸದರಿ ವೈದ್ಯರ ಅನಧಿಕೃತ ಗೈರುಹಾಜರಾತಿ ಬಗ್ಗೆ ಇ ಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ನೋಟೀಸಿನೊಂದಿಗೆ, ದೋಷಾರೋಪಣೆ ಪಟ್ಟಿಯನ್ನು ಜಾರಿ ಮಾಡಿ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇ ದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಅವರಿಗೆ ಸೂಚಿಸಲಾಗಿತ್ತು. ಡಾ.ಎಂ.ರಾಜೇಶ್ವರಿ, ವಿಮಾ ವೈದ್ಯಾಧಿಕಾರಿ ಇ ವರು ಮೇಲೆ (3)ರಲ್ಲಿ ಓದಲಾದ ದಿನಾಂಕ:12-06-02ರ ತಮ್ಮ ರಕ್ಷಣಾ ಹೇಳಿಕೆಯಲ್ಲಿ ಸಾಂಸಾರಿಕ ತೊಂದರೆಗಳಿಂದಾಗಿ ಸಕಾಲದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ತಿಳಿಸುತ್ತಾ ತಮಗೆ ಕರ್ತವ್ಯ ನಿರ್ವಹಿಸಲು ಅವಕಾಶ ನೀಡುವಂತೆ ಕೋರಿದ್ದರು. ಅಲ್ಲದೆ ದಿನಾಂಕ: 16.08.2002ರ ತಮ್ಮ ಮನವಿ ಪತ್ರದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡುವಂತೆ ಕೋರಿದ್ದರಿಂದ ಮೇಲೆ (5) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಇವರ ಅನಧಿಕೃತ ಗೈರು ಹಾಜರಿಯ ಬಗ್ಗೆ ಇಲಾಖಾ ವಿಚಾರಣೆ ಬಾಕಿ ಇರಿಸಿ ಇವರನ್ನು ಕಾರಾವಿ ಆಸ್ಪತ್ರೆ, ಮಂಗಳೂರು ಇಲ್ಲಿಗೆ ನೇಮಕ ಮಾಡಲಾಗಿತ್ತು. ಅದರಂತೆ ಸದರಿ ವೈದ್ಯರು ದಿನಾಂಕ: 18.10.2002 ರಂದು ಪೂರ್ವಾಹ್ನ ಕಾರಾವಿ ಆಸ್ಪತ್ರೆ, ಮಂಗಳೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿದ್ದಾರೆ. ಡಾ: ಎಂ. ರಾಜೇಶ್ವರಿ, ಇವರು ತಮ್ಮ ವಿರುದ್ಧ ಮಾಡಲಾಗಿದ್ದ ದೋಷಾರೋಪಣೆಗಳಿಗೆ ಸಂಬಂಧಿಸಿದಂತೆ ಸಲ್ಲಿಸಿದ್ದ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಿ ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಸತ್ಯಾಸತ್ಯತೆಯನ್ನು ಪರಿಶೀಲಿಸುವ ದೃಷ್ಟಿಯಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (6) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶ್ರೀ ಡಿ. ವೆಂಕಟರಾಮಯ್ಯ, ಪ್ರಥಮ ದರ್ಜೆ ಸಹಾಯಕರು, ಕಾರಾವಿ ಯೋ (ವೈ) ಸೇವೆಗಳ ನಿರ್ದೇಶನಾಲಯ, ರಾಜಾಜಿನಗರ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಮೇಲೆ (7)ರಲ್ಲಿ ಓದಲಾದ ತಮ್ಮ ವರದಿಯಲ್ಲಿ ಡಾ.ಎಂ.ರಾಜೇಶ್ವರಿ ಇ ವರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯ ಪಟ್ಟಿರುತ್ತಾರೆ. ವಿಚಾರಣಾ ವರದಿಯ ಪ್ರತಿಯನ್ನು ಮೇಲೆ (8)ರಲ್ಲಿ ಓದಲಾದ ದಿನಾಂಕ:06-03-2004ರ ನೋಟೀಸಿನೊಂದಿಗೆ ವಿಚಾರಣಾ ವರದಿಯಲ್ಲಿನ ಅಂಶಗಳನ್ನು ಏಕೆ ಒಪ್ಪಿಕೊಳ್ಳಬಾರದು ಎಂಬ ಬಗ್ಗೆ ತಮ್ಮ ಅಹವಾಲೇನಾದರೂ ಇ ದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಿ ಡಾ.ಎಂ.ರಾಜೇಶ್ವರಿ, ವಿಮಾ ವೈದ್ಯಾಧಿಕಾರಿಗಳು ಇ ವರ ವಿಳಾಸಕ್ಕೆ ಕಳುಹಿಸಲಾಗಿತ್ತು. ಮೇಲೆ (10)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಡಾ.ಎಂ.ರಾಜೇಶ್ವರಿ ಇ ವರ ಕೌಟುಂಬಿಕ ಒತ್ತಡದಿಂದ ಕರ್ತವ್ಯಕ್ಕೆ ಗೈರುಹಾಜರಾಗಿರುವುದಾಗಿ ತಿಳಿಸಿರುತ್ತಾರೆ. ಈ ಮಧ್ಯೆ ಮೇಲೆ (9)ರಲ್ಲಿ ಓದಲಾದ ದಿನಾಂಕ:27-02-2004ರ ಪತ್ರದಲ್ಲಿ ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇ ವರು ಡಾ.ಎಂ.ರಾಜೇಶ್ವರಿ, ವಿಮಾ ವೈದ್ಯಾಧಿಕಾರಿ ಇ ವರು ಕಾರಾವಿ ಆಸ್ಪತ್ರೆ, ಮಂಗಳೂರಿನಲ್ಲಿ ದಿನಾಂಕ:18-10-2002ರಂದು ಸೇವಾ ವರದಿ ಮಾಡಿಕೊಂಡಿದ್ದು ದಿನಾಂಕ:01-01-2003 ರಿಂದ 01.04.03 ರವರೆಗೆ ಗಳಿಕೆ ರಜೆ ಅರ್ಜಿಯನ್ನು ಸಲ್ಲಿಸಿ ದಿನಾಂಕ:02-04-2003 ರಿಂದ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದಾಗಿಯೂ ಸದರಿಯವರ ಇ ತ್ತೀಚಿನ ವಿಳಾಸಕ್ಕೆ ನೋಂದಾಯಿತ ಅಂಚೆ ಮೂಲಕ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ನೋಟೀಸುಗಳನ್ನು ಕಳುಹಿಸಲಾಗಿದ್ದರೂ ಸಹ ಅವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಡಾ.ಎಂ.ರಾಜೇಶ್ವರಿ ಇವರು ದಿನಾಂಕ:08-07-2000 ದಿಂದ 17-10-2002ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದು ವಿಚಾರಣಾ ವರದಿಯಿಂದ ಸಾಬೀತಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 420 ಎಲ್‌ಎಸ್‌ಐ 2001,ಬೆಂಗಳೂರು,ದಿ: 13ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಡಾ.ಎಂ.ರಾಜೇಶ್ವರಿ, ವಿಮಾ ವೈದ್ಯಾಧಿಕಾರಿ, ಇವರು ಕಾರಾವಿ ರೋಗ ಪತ್ತೆ ಹಚ್ಚುವ ಕೇಂದ್ರ, ಬಸವನಗುಡಿ, ಬೆಂಗಳೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿ:08-07-2000 ದಿಂದ 17-10-2002ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾದ ಆರೋಪ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108 ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vii)ರನ್ವಯ ಇವರಿಗೆ ಸರ್ಕಾರಿ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಲಾಗಿದೆ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ವಿಶ್ವನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.

ಪಿ.ಆರ್. 754

**ಕಾನೂನು ಸಚಿವಾಲಯ**

**ವಿಷಯ:** ಶ್ರೀ ವಿಠಲ ರಾಮಚಂದ್ರ ಹೆಗಡೆ, (ವಿ.ಆರ್.ಹೆಗಡೆ), ವಕೀಲರು, ದಾಂಡೇಲಿ, ಇವರನ್ನು ಉತ್ತರ ಕನ್ನಡ ಜಿಲ್ಲೆಯ ದಾಂಡೇಲಿ ಕಂದಾಯ ತಾಲ್ಲೂಕು ಕ್ಷೇತ್ರದ ನೋಟರಿ ಹುದ್ದೆಗೆ ನೇಮಕ ಮಾಡುವ ಬಗ್ಗೆ-- ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್‌ಸಿಎಲ್ 2000 ದಿನಾಂಕ:23.06.2000.
2. ಕರ್ನಾಟಕ ಉಚ್ಛ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:24803-24804:2000ರಲ್ಲಿನ ಆದೇಶ ದಿನಾಂಕ:04.11.2003.
3. ಕರ್ನಾಟಕ ಉಚ್ಛ ನ್ಯಾಯಾಲಯದ ರಿಟ್ ಅಪೀಲ್ ಸಂಖ್ಯೆ: 7987-7988: 2003 ರಲ್ಲಿನ ಆದೇಶ ದಿನಾಂಕ: 09.01.2004.
4. ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್‌ಸಿಎಲ್ 2000 ದಿನಾಂಕ: 24.03.04.
5. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ, ಕಾರವಾರ ಇವರಿಗೆ ಬರೆದ ಪತ್ರ ಸಂಖ್ಯೆ: ಲಾ 36 ಎಲ್‌ಸಿಎಲ್ 2000 ದಿನಾಂಕ:24.03.2004.
6. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಕಾರವಾರ ಇವರ ಪತ್ರ ಸಂಖ್ಯೆ: ಎಡಿಎಂ:II:2463:2004 ದಿನಾಂಕ:17.05.04.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ವಿಠಲ ರಾಮಚಂದ್ರ ಹೆಗಡೆ, ವಕೀಲರು, ದಾಂಡೇಲೆ, ಇವರನ್ನು ದಾಂಡೇಲೆ ಕಂದಾಯ ತಾಲ್ಲೂಕಿಗೆ ನೋಟರಿಯಾಗಿ ನೇಮಕ ಮಾಡಲಾಗಿತ್ತು.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಕರ್ನಾಟಕ ಉಚ್ಛ ನ್ಯಾಯಾಲಯದ ಆದೇಶದಲ್ಲಿ ಶ್ರೀ ನೀಲಕಂಠ ಮತ್ತು ಶ್ರೀ ಶಂಕರ್, ವಕೀಲರುಗಳು, ಸಲ್ಲಿಸಿದ್ದ ರಿಟ್ ಅರ್ಜಿಯನ್ನು ಪುರಸ್ಕರಿಸಿ ಶ್ರೀ ವಿಠಲ ರಾಮಚಂದ್ರ ಹೆಗಡೆ, ವಕೀಲರು, ಇವರ ನೋಟರಿ ನೇಮಕಾತಿ ಆದೇಶವನ್ನು ರದ್ದುಗೊಳಿಸಿ ಹೊಸದಾಗಿ ಅರ್ಜಿಗಳನ್ನು ಅಹ್ವಾನಿಸಿ ನಿಯಮಗಳನ್ವಯ ಭರ್ತಿ ಮಾಡುವಂತೆ ಆದೇಶಿಸಿತ್ತು.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಕರ್ನಾಟಕ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ದಿನಾಂಕ: 09.01.2004ರ ಆದೇಶದಲ್ಲಿ ಶ್ರೀ ವಿಠಲ ರಾಮಚಂದ್ರ ಹೆಗಡೆ, ಇವರು ಸಲ್ಲಿಸಿದ್ದ ರಿಟ್ ಅರ್ಜಿಯನ್ನು ತಿರಸ್ಕರಿಸಿ 6 ತಿಂಗಳ ಒಳಗಾಗಿ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ಸೂಚಿಸಿ ದಿನಾಂಕ: 09.01.04 ರಿಂದ 6 ತಿಂಗಳ ಅವಧಿಗೆ ಅಥವಾ ಹೊಸದಾಗಿ ನೋಟರಿ ಹುದ್ದೆ ಭರ್ತಿ ಮಾಡುವವರೆಗೆ ಶ್ರೀ ವಿಠಲ ರಾಮಚಂದ್ರ ಹೆಗಡೆ ಇವರಿಗೆ ನೋಟರಿಯಾಗಿ ಮುಂದುವರೆಯಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ವಿಠಲ ರಾಮಚಂದ್ರ ಹೆಗಡೆ, ವಕೀಲರು, ದಾಂಡೇಲಿ ಇವರ ದಾಂಡೇಲಿ ಕಂದಾಯ ಕ್ಷೇತ್ರದ ನೋಟರಿ ನೇಮಕಾತಿಯನ್ನು ದಿನಾಂಕ: 08.07.04 ರಿಂದ ಅಥವಾ ನೋಟರಿ ಹುದ್ದೆ ಭರ್ತಿ ಮಾಡಲಾದ ದಿನಾಂಕದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲೆ ಕ್ರಮಾಂಕ (5) ರಲ್ಲಿ ಓದಲಾದ ಸರ್ಕಾರಿ ಪತ್ರದಲ್ಲಿ ಶ್ರೀ ವಿಠಲ ರಾಮಚಂದ್ರ ಹೆಗಡೆ ಇವರ ನೇಮಕಾತಿ ರದ್ಧತಿಯಿಂದ ತೆರವಾದ ಹುದ್ದೆಯನ್ನು ಭರ್ತಿ ಮಾಡಲು ವಕೀಲರುಗಳಿಂದ ಅರ್ಜಿ ಆಹ್ವಾನಿಸಿ ನಿಯಮಗಳನ್ವಯ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಬೇಕೆಂದು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕಾರವಾರ ಇವರನ್ನು ಕೋರಲಾಯಿತು.

ಮೇಲೆ ಕ್ರಮಾಂಕ (6)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕಾರವಾರ ಇವರು ನೋಟರಿ ಹುದ್ದೆಗೆ ಅರ್ಜಿಗಳನ್ನು ಅಹ್ವಾನಿಸಿದ್ದು, 7 ಅರ್ಜಿಗಳು ಬಂದಿವೆಯೆಂದು ತಿಳಿಸಿ, ಸದರಿ ಏಳು ಅರ್ಜಿದಾರರ ಪೈಕಿ ಒಬ್ಬರನ್ನು ನೋಟರಿಯಾಗಿ ನೇಮಕ ಮಾಡಲು ಶಿಫಾರಸ್ಸು ಮಾಡಿ, ಅರ್ಜಿಗಳನ್ನು ಸಲ್ಲಿಸಿರುತ್ತಾರೆ. ಅದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 36 ಎಲ್‌ಸಿಎಲ್ 2000, ಬೆಂಗಳೂರು, ದಿನಾಂಕ:8ನೇ ಜುಲೈ 2004.**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕಾರವಾರ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ

ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ವಿಠಲ ರಾಮಚಂದ್ರ ಹೆಗಡೆ, ವಕೀಲರು, ನಂ.1: 543, ರಾಘವೇಂದ್ರ ಮಠದ ಹಿಂಭಾಗ, ದಾಂಡೇಲಿ, ಇ ವರನ್ನು ದಾಂಡೇಲಿ ಕಂದಾಯ ತಾಲ್ಲೂಕು ಕ್ಷೇತ್ರಕ್ಕೆ ಈ ಹಿಂದೆ ಅವರ ನೇಮಕಾತಿಯ ರದ್ದತಿಯಿಂದ ತೆರವಾದ ನೋಟರಿ ಹುದ್ದೆಗೆ ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ದಾಂಡೇಲಿ ಕಂದಾಯ ತಾಲ್ಲೂಕು ಕ್ಷೇತ್ರದ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು ``0070 ಇ ತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇ ತರೆ ಸ್ವೀಕೃತಿಗಳು-06 ಇ ತರೆ ಬಾಬ್ತುಗಳು`` ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1,000.00 (ರೂ.ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು``.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಈಶ್ವರ ಪ್ರಸಾದ್**

ಪಿ.ಆರ್. 755 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇ ಲಾಖೆ, ಆಡಳಿತ-2

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ತಲಕಾವೇರಿ - ಭಾಗಮಂಡಲ ಅಭಿವೃದ್ಧಿ ಪ್ರಾಧಿಕಾರವನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಜಸಂಇ 49 ಎಂಎಂಹೆಚ್ 2003 ದಿನಾಂಕ: 20.9.2003

2. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು ರವರ ಪತ್ರ ಸಂಖ್ಯೆ: ಕಾನೀನಿ:ಬೆಂ:ತಾಂತ್ರಿಕ:ತಲಕಾವೇರಿ:2004, ದಿನಾಂಕ: 2.7.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ತಲಕಾವೇರಿ - ಭಾಗಮಂಡಲ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ದಿನಾಂಕ: 2.7.2004 ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು - ಇವರು ತಲಕಾವೇರಿ - ಭಾಗಮಂಡಲ ಅಭಿವೃದ್ಧಿ ಪ್ರಾಧಿಕಾರವನ್ನು ಪುನರ್ ರಚಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | | |
|---|---|---|
| 1) | ಮಾನ್ಯ ಮುಖ್ಯಮಂತ್ರಿಗಳು | ಅಧ್ಯಕ್ಷರು |
| 2) | ಮಾನ್ಯ ಜಲ ಸಂಪನ್ಮೂಲ ಮತ್ತು ಸಾರಿಗೆ ಸಚಿವರು | ಉಪಾಧ್ಯಕ್ಷರು |
| 3) | ಮಾನ್ಯ ಕಂದಾಯ ಮತ್ತು ಸಂಸದೀಯ ವ್ಯವಹಾರ ಸಚಿವರು | ಸದಸ್ಯರು |
| 4) | ಶ್ರೀ ಸದಾನಂದ ಗೌಡ ಮಾನ್ಯ ಲೋಕಸಭಾ ಸದಸ್ಯರು, ಮಂಗಳೂರು ಕ್ಷೇತ್ರ | ಸದಸ್ಯರು |
| 5) | ಶ್ರೀ ಬೋಪಯ್ಯ ಕೆ.ಜಿ. ಮಾನ್ಯ ವಿಧಾನಸಭಾ ಸದಸ್ಯರು ಮಡಿಕೇರಿ ಕ್ಷೇತ್ರ | ಸದಸ್ಯರು |
| 6) | ಶ್ರೀ ಬಸವರಾಜ ಹೆಚ್.ಡಿ. ಮಾನ್ಯ ವಿಧಾನ ಸಭಾ ಸದಸ್ಯರು ವಿರಾಜಪೇಟೆ ಕ್ಷೇತ್ರ | ಸದಸ್ಯರು |
| 7) | ಶ್ರೀ ಜೀವಿಜಯ ಬಿ.ಎ. ಮಾನ್ಯ ವಿಧಾನ ಸಭಾ ಸದಸ್ಯರು ಸೋಮವಾರಪೇಟೆ ಕ್ಷೇತ್ರ | ಸದಸ್ಯರು |
| 8) | ಶ್ರೀ ಅರುಣ್ ಮಾಚಯ್ಯ ಸಿ.ಎಸ್. ಮಾನ್ಯ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 9) | ಕೊಡಗು ಜಿಲ್ಲಾ ಪಂಚಾಯತ್ ಅಧ್ಯಕ್ಷರು | ಸದಸ್ಯರು |
| 10) | ಪ್ರಧಾನ ಕಾರ್ಯದರ್ಶಿ ಆರ್ಥಿಕ ಇಲಾಖೆ | ಸದಸ್ಯರು |
| 11) | ಪ್ರಧಾನ ಕಾರ್ಯದರ್ಶಿ ಜಲ ಸಂಪನ್ಮೂಲ ಇಲಾಖೆ | ಸದಸ್ಯರು |
| 12) | ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ | ಸದಸ್ಯರು |
| 13) | ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 14) | ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ | ಸದಸ್ಯರು |
| 15) | ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ | ಸದಸ್ಯ ಕಾರ್ಯದರ್ಶಿಗಳು |
| 16) | ಪ್ರವಾಸೋದ್ಯಮ ಆಯುಕ್ತರು | ಸದಸ್ಯರು |
| 17) | ಧಾರ್ಮಿಕ ದತ್ತಿ ಆಯುಕ್ತರು | ಸದಸ್ಯರು |
| 18) | ಮುಖ್ಯ ವಾಸ್ತುಶಿಲ್ಪಿಗಳು ಕರ್ನಾಟಕ ಸರ್ಕಾರ | ಸದಸ್ಯರು |
| 19) | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯರು |
| 20) | ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ | ಸದಸ್ಯರು |
| 21) | ಪೊಲೀಸ್ ವರಿಷ್ಠಾಧಿಕಾರಿಗಳು, ಕೊಡಗು ಜಿಲ್ಲೆ | ಸದಸ್ಯರು |
| 22) | ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್ ಕೊಡಗು | ಸದಸ್ಯರು |
| 23) | ಶ್ರೀ ಟಿ.ಡಿ. ಮನಮೋಹನ್, (ನಿ) ಮುಖ್ಯ ಇಂಜಿನಿಯರ್ | ಸದಸ್ಯರು |

3) ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 69 ಎನ್‌ಪಿಸಿ 2004, ಬೆಂಗಳೂರು, ದಿನಾಂಕ: 14ನೇ ಜುಲೈ 2004**

ತಲಕಾವೇರಿ - ಭಾಗಮಂಡಲ ಪ್ರದೇಶವನ್ನು ಸಮಗ್ರವಾಗಿ ಅಭಿವೃದ್ಧಿಗೊಳಿಸಲು ಸರ್ಕಾರಿ ಆದೇಶ ಸಂಖ್ಯೆ: ಜಸಂಇ 49 ಎಂಎಂಹೆಚ್ 2003 ದಿನಾಂಕ: 20.9.2003 ರಲ್ಲಿ ರಚಿಸಲಾದ ತಲಕಾವೇರಿ ಭಾಗಮಂಡಲ ಅಭಿವೃದ್ಧಿ ಪ್ರಾಧಿಕಾರವನ್ನು ಮುಂದಿನ ಆದೇಶ ಹೊರಡಿಸುವವರೆಗೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1) | ಮಾನ್ಯ ಮುಖ್ಯಮಂತ್ರಿಗಳು | ಅಧ್ಯಕ್ಷರು |
| 2) | ಮಾನ್ಯ ಜಲ ಸಂಪನ್ಮೂಲ ಮತ್ತು ಸಾರಿಗೆ ಸಚಿವರು | ಉಪಾಧ್ಯಕ್ಷರು |
| 3) | ಮಾನ್ಯ ಕಂದಾಯ ಮತ್ತು ಸಂಸದೀಯ ವ್ಯವಹಾರ ಸಚಿವರು | ಸದಸ್ಯರು |
| 4) | ಶ್ರೀ ಸದಾನಂದ ಗೌಡ ಮಾನ್ಯ ಲೋಕಸಭಾ ಸದಸ್ಯರು, ಮಂಗಳೂರು ಕ್ಷೇತ್ರ | ಸದಸ್ಯರು |
| 5) | ಶ್ರೀ ಬೋಪಯ್ಯ ಕೆ.ಜಿ. ಮಾನ್ಯ ವಿಧಾನಸಭಾ ಸದಸ್ಯರು ಮಡಿಕೇರಿ ಕ್ಷೇತ್ರ | ಸದಸ್ಯರು |
| 6) | ಶ್ರೀ ಬಸವರಾಜ ಹೆಚ್.ಡಿ. ಮಾನ್ಯ ವಿಧಾನ ಸಭಾ ಸದಸ್ಯರು ವಿರಾಜಪೇಟೆ ಕ್ಷೇತ್ರ | ಸದಸ್ಯರು |
| 7) | ಶ್ರೀ ಜೀವಿಜಯ ಬಿ.ಎ. ಮಾನ್ಯ ವಿಧಾನ ಸಭಾ ಸದಸ್ಯರು ಸೋಮವಾರಪೇಟೆ ಕ್ಷೇತ್ರ | ಸದಸ್ಯರು |
| 8) | ಶ್ರೀ ಅರುಣ್ ಮಾಚಯ್ಯ ಸಿ.ಎಸ್. ಮಾನ್ಯ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 9) | ಕೊಡಗು ಜಿಲ್ಲಾ ಪಂಚಾಯತ್ ಅಧ್ಯಕ್ಷರು | ಸದಸ್ಯರು |
| 10) | ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 11) | ಪ್ರಧಾನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ | ಸದಸ್ಯರು |
| 12) | ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ | ಸದಸ್ಯರು |
| 13) | ಕಾರ್ಯದರ್ಶಿ, ಕಂದಾಯ ಇಲಾಖೆ | ಸದಸ್ಯರು |
| 14) | ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ | ಸದಸ್ಯರು |
| 15) | ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ | ಸದಸ್ಯ ಕಾರ್ಯದರ್ಶಿಗಳು |
| 16) | ಪ್ರವಾಸೋದ್ಯಮ ಆಯುಕ್ತರು | ಸದಸ್ಯರು |
| 17) | ಧಾರ್ಮಿಕ ದತ್ತಿ ಆಯುಕ್ತರು | ಸದಸ್ಯರು |
| 18) | ಮುಖ್ಯ ವಾಸ್ತುಶಿಲ್ಪಿಗಳು ಕರ್ನಾಟಕ ಸರ್ಕಾರ | ಸದಸ್ಯರು |
| 19) | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯರು |
| 20) | ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ | ಸದಸ್ಯರು |
| 21) | ಪೊಲೀಸ್ ವರಿಷ್ಠಾಧಿಕಾರಿಗಳು, ಕೊಡಗು ಜಿಲ್ಲೆ | ಸದಸ್ಯರು |
| 22) | ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್ ಕೊಡಗು | ಸದಸ್ಯರು |
| 23) | ಶ್ರೀ ಟಿ.ಡಿ. ಮನಮೋಹನ್, (ನಿ) ಮುಖ್ಯ ಇಂಜಿನಿಯರ್ | ಸದಸ್ಯರು |

ಅಧಿಕಾರೇತ ಸದಸ್ಯರ ಮತ್ತು ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ: 3.2.2002 ರನ್ವಯ ನೀಡತಕ್ಕದ್ದು. ಈ ಬಗ್ಗೆ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಲ್. ಜಗದೀಶ್**

ಪಿ.ಆರ್. 756 ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3), ಜಲ ಸಂಪನ್ಮೂಲ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ದಿನಗೂಲಿ ಆಧಾರದ ಮೇಲೆ ಮಾಸಿಕ ವೇತನ ಸಿಬ್ಬಂದಿಯಾಗಿ ಸಲ್ಲಿಸಿರುವ ಸೇವೆಯನ್ನು ನಿವೃತ್ತಿ ವೇತನ ಸೌಲಭ್ಯಕ್ಕೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 90, ದಿನಾಂಕ: 6.8.1990.
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 12 ಎಸ್‌ಎಲ್‌ಸಿ 97, ದಿನಾಂಕ: 26.9.1998.
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 30.9.2003.
4. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು, ಇವರ ಪತ್ರ ಸಂಖ್ಯೆ: ಪಿಎಂ/ಜಿ-1/2003-04/620, ದಿನಾಂಕ: 9/14.1.2004.

**ಪ್ರಸ್ತಾವನೆ:**

ಸರ್ಕಾರದ ವಿವಿಧ ಇಲಾಖೆಗಳಲ್ಲಿ ದಿನಾಂಕ: 1.7.1984 ರಂದು ಅಥವಾ ಅದಕ್ಕಿಂತ ಮುಂಚೆ ನೇಮಕಾತಿ ಹೊಂದಿರುವ ಸಾಂದರ್ಭಿಕ:ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸುವ ಕುರಿತು ಮೇಲೆ (1) ರಲ್ಲಿ ಓದಲಾದ ದಿನಾಂಕ: 6.8.1990ರ ಆದೇಶದಲ್ಲಿ ಸೂಚನೆಗಳನ್ನು ನೀಡಲಾಗಿದೆ. ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ, ದಿನಾಂಕ: 6.8.1990ರ ಆದೇಶದ ಪ್ರಕಾರ ಸೇವೆಯಲ್ಲಿ ಸಕ್ರಮಗೊಳಿಸಿದ ನಂತರ ನಿವೃತ್ತಿ ಹೊಂದಿದ ನೌಕರರು ನಿವೃತ್ತಿ ವೇತನ ಸೌಲಭ್ಯ ಪಡೆಯಲು ಕನಿಷ್ಠ 10 ವರ್ಷಗಳ ಅರ್ಹತಾ ಸೇವೆಯನ್ನು

ಪೂರೈಸದೇ ಇರುವ ಪ್ರಕರಣಗಳಲ್ಲಿ, ಅಂತಹ ನೌಕರರು ದಿನಗೂಲಿ ಆಧಾರದ ಮೇಲೆ ಸಲ್ಲಿಸಿರುವ ಸೇವೆ ಮತ್ತು ಮಾಸಿಕ ವೇತನ ಸಿಬ್ಬಂದಿಯಾಗಿ ಸೇವೆ ಸಲ್ಲಿಸಿದ್ದಲ್ಲಿ ಆ ಸೇವೆಯನ್ನು ಒಳಗೊಂಡಂತೆ ಸಲ್ಲಿಸಿರುವ ಸೇವೆಯ 1/4 ಸೇವೆಯನ್ನು (ಗರಿಷ್ಠ ಮಿತಿ 3 ವರ್ಷಗಳು) ಕನಿಷ್ಠ ಅರ್ಹತಾ ಸೇವೆಗೆ ಕಡಿಮೆಯಾದ ಅವಧಿಗೆ ಒಳಪಟ್ಟು ಸೇರ್ಪಡೆ ಮಾಡಲು ಆದೇಶಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 30.9.2003ರ ಆದೇಶದಲ್ಲಿ, ದಿನಾಂಕ: 1.9.2003 ರಿಂದ ಅನ್ವಯವಾಗುವಂತೆ, ನಿವೃತ್ತಿ ವೇತನ ಪಡೆಯಲು ಕನಿಷ್ಠ 10 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಸಲ್ಲಿಸಬೇಕೆಂಬ ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಯ ನಿಯಮ 222ರ ಪರಂತುಕದಲ್ಲಿನ ಉಪಬಂಧಗಳನ್ನು ಮಾರ್ಪಡಿಸಿ ಕನಿಷ್ಠ 15 ವರ್ಷಗಳ ಅರ್ಹತಾ ಸೇವೆ ಸಲ್ಲಿಸಬೇಕೆಂದು ಆದೇಶಿಸಲಾಗಿದೆ. ಆದಕಾರಣ, ಮೇಲೆ (4) ರಲ್ಲಿ ಓದಲಾದ ಮಹಾಲೇಖಪಾಲರ ದಿನಾಂಕ: 9/14.1.2004ರ ಪತ್ರದಲ್ಲಿ ದಿನಾಂಕ: 1.9.2003 ರಂದು ಅಥವಾ ನಂತರ ನಿವೃತ್ತಿ ಹೊಂದಿದ ಪ್ರಕರಣಗಳಲ್ಲಿ ದಿನಾಂಕ: 26.9.1998ರ ಆದೇಶದಲ್ಲಿ ನಮೂದಿಸಿರುವ '10 ವರ್ಷಗಳು'ರ ಬದಲಾಗಿ '15 ವರ್ಷಗಳು' ಎಂದು ಸೇರ್ಪಡೆ ಮಾಡಿ ಓದಿಕೊಂಡು ದಿನಗೂಲಿ ಆಧಾರದ ಮೇಲಿನ ಸೇವೆ, ಮಾಸಿಕ ವೇತನ ಸಿಬ್ಬಂದಿಯಾಗಿ ಸೇವೆ ಸಲ್ಲಿಸಿದ್ದಲ್ಲಿ ಆ ಸೇವೆಯು ಒಳಗೊಂಡಂತೆ 1/4 ಸೇವೆಯನ್ನು (ಗರಿಷ್ಠ ಮಿತಿ 3 ವರ್ಷಗಳು) ನಿವೃತ್ತಿ ವೇತನಕ್ಕಾಗಿ ಅರ್ಹತೆ ಪಡೆಯಲು, 15 ವರ್ಷಗಳ ಅರ್ಹತಾ ಸೇವೆಗೆ ಕಡಿಮೆಯಾದ ಅವಧಿಗೆ ಒಳಪಟ್ಟು ಸೇರ್ಪಡೆ ಮಾಡುವ ಕುರಿತು ಸ್ಪಷ್ಟೀಕರಣ ಕೋರಲಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸೇಸ್ಥಅ 2004, ಬೆಂಗಳೂರು, ದಿನಾಂಕ: 8ನೇ ಜುಲೈ 2004**

ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 12 ಎಸ್ಎಲ್ಸಿ 97, ದಿನಾಂಕ: 26.9.1998 ರಲ್ಲಿ ದಿನಾಂಕ: 6.8.90ರ ಸರ್ಕಾರದ ಆದೇಶದ ಪ್ಯಾರಾ 14ನ್ನು ಮಾರ್ಪಡಿಸಿದ್ದು, ಹೀಗೆ ಮಾರ್ಪಡಿಸಿದ ಪ್ಯಾರಾ 14ರ ಮೊದಲ ವಾಕ್ಯದಲ್ಲಿ "Short of 10 years" ಎಂದಿರುವುದನ್ನು ದಿನಾಂಕ: 1.9.2003 ರಿಂದ ಜಾರಿಗೆ ಬರುವಂತೆ "Short of 15 years" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 757

ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು).

## ENERGY SECRETARIAT

**Subject:** Transfer of 2.50 M.W. Wind Power Capacity in favour of M/s Rajesh Construction Company Limited-orders relating to.

**Read:** 1. Government Order No: DE 170 NCE 2002, dated: 12.8.2002.

2. Letter No: KRED/08/RCC/2004/1102, dated: 18.6.2004 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order dated: 12.8.2002 read at (1) above, sanction has been accorded for implementation of 9.90 M.W. capacity Wind Power Project at Chitradurga District to M/s Kurumaradikere Energy Limited, (earlier name M/s Windia Power Limited).

(2) Now, the Managing Director, Karnataka Renewable Energy Development Limited, Bangalore, in his letter dated: 18.6.2004 read at (2) above, has recommended to the Government for transfer of 2.50 M.W. Wind Power capacity in favour of M/s Rajesh Construction Company Limited, at survey No: 62 of Ingaladalu Village of Chitradurga District, from out of the sanctioned 9.90 M.W. capacity of M/s Kurumaradikere Energy Limited, (earlier name M/s Windia Power Limited).

(3) The proposal has been examined and pass the following order:

**Government Order No: DE 224 NCE 2004, Bangalore, Dated: 14th July 2004.**

(4) Government are pleased to accord sanction for transfer of 2.50 M.W. Wind Power capacity in favour of M/s Rajesh Construction Company Limited in the schedule indicated below, from out of 9.90 M.W. capacity of M/s Kurumaradikere Energy Limited allotted in the Government order dated: 12.8.2002.

**SCHEDULE**

| Sl.No. | Village Name | Taluk/District | Survey Number | Extent of area acres/gunta |
|---|---|---|---|---|
| 1 | Ingaladalu | Chitradurga | 62 | 1 acres |

(5) The terms and conditions of the original allotment made in the Government order read at (1) above are **IPSOFACTO** applicable.

By Order and in the Name of the Governor of Karnataka,

**K.L. JAYARAM**

P.R. 758

Under Secretary to Government, Energy Department.

**Subject:** Transfer of 1.25 M.W. Wind Power Capacity in favour of M/s Ferromar Shipping Private Limited-orders relating to.

**Read:** 1. Government Order No: DE 170 NCE 2002, dated: 12.8.2002.

2. Letter No: KRED/08/FSP/2004/1098, dated: 18.6.2004 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order dated: 12.8.2002 read at (1) above, sanction has been accorded for implementation of 9.90 M.W. capacity Wind Power Project at Chitradurga District to M/s Kurumaradikere Energy Limited, (earlier name M/s Windia Power Limited).

(2) Now, the Managing Director, Karnataka Renewable Energy Development Limited, Bangalore, in his letter dated: 18.6.2004 read at (2) above, has recommended to the Government for transfer of 1.25 M.W. Wind Power capacity in favour of M/s Ferromar Shipping Private Limited, at survey No: 62 of Ingaladalu Village of Chitradurga District, from out of the sanctioned 9.90 M.W. capacity of M/s Kurumaradikere Energy Limited, (earlier name M/s Windia Power Limited).

(3) The proposal has been examined and pass the following order:

**Government Order No: DE 225 NCE 2004, Bangalore, Dated: 14th July 2004.**

(4) Government are pleased to accord sanction for transfer of 1.25 M.W. Wind Power capacity in favour of M/s Ferromar Shipping Private Limited in the schedule indicated below, from out of 9.90 M.W. capacity of M/s Kurumaradikere Energy Limited allotted in the Government order dated: 12.8.2002.

**SCHEDULE**

| Sl.No. | Village Name | Taluk/District | Survey Number | Extent of area acres/gunta |
|---|---|---|---|---|
| 1 | Ingaladalu | Chitradurga | 62 | 1 acres |

(5) The terms and conditions of the original allotment made in the Government order read at (1) above are **IPSOFACTO** applicable.

By Order and in the Name of the Governor of Karnataka,

**K.L. JAYARAM**

P.R. 759 Under Secretary to Government, Energy Department.

**Subject:** Transfer of 0.6 M.W. Wind Power Capacity in favour of M/s Primetex Apparels India Private Limited-orders relating to.

**Read:** 1. Government Order No: DE 98 NCE 2000, dated: 10.7.2000.

2. Letter No: KRED/08/PTAIL/2004/1196, dated: 3/6.7.2004 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order dated: 10.7.2000 read at (1) above, sanction has been accorded for implementation of 149 M.W. capacity Wind Power Project at Chitradurga District to M/s Enercon India Limited.

(2) Now, the Managing Director, Karnataka Renewable Energy Development Limited, Bangalore, in his letter dated: 3/6.7.2004 read at (2) above, has recommended to the Government for transfer of 0.6 M.W. Wind Power capacity in favour of M/s Primetex Apparels India Private Limited, at survey No: 53 of Elladakere Village of Chitradurga District, from out of the sanctioned 149 M.W. capacity of M/s Enercon India Limited.

(3) The proposal has been examined and pass the following order:

**Government Order No: DE 228 NCE 2004, Bangalore, Dated: 15th July 2004.**

(4) Government are pleased to accord sanction for transfer of 0.6 M.W. Wind Power capacity in favour of M/s Primetex Apparels India Private Limited in the schedule indicated below, from out of 149 M.W. capacity of M/s Enercon India Limited allotted in the Government order dated: 10.7.2000.

**SCHEDULE**

| Sl.No. | Village Name | Taluk/District | Survey Number | Extent of area acres/gunta |
|---|---|---|---|---|
| 1 | Elladakere | Hiriyur Chitradurga | 53 | 1.213 (ha) |

(5) The terms and conditions of the original allotment made in the Government order read at (1) above are **IPSOFACTO** applicable.

By Order and in the Name of the Governor of Karnataka,

**K.L. JAYARAM**

P.R. 760 Under Secretary to Government, Energy Department.

**Subject:** Transfer of 2.50 M.W. Wind Power Capacity in favour of M/s Gangadhar Narsingdas Agrawal (HUF)-orders relating to.

**Read:** 1. Government Order No: DE 170 NCE 2002, dated: 12.8.2002.

2. Letter No: KRED/08/GNA/2004/1101, dated: 18.6.2004 received from the Managing Director, Karnataka Renewable Energy Development Limited, Bangalore.

**PREAMBLE**:

In the Government Order dated: 12.8.2002 read at (1) above, sanction has been accorded for implementation of 9.90 M.W. capacity Wind Power Project at Chitradurga District to M/s Kurumaradikere Energy Limited, (earlier name M/s Windia Power Limited).

(2) Now, the Managing Director, Karnataka Renewable Energy Development Limited, Bangalore, in his letter dated: 18.6.2004 read at (2) above, has recommended to the Government for transfer of 2.50 M.W. Wind Power capacity in favour of M/s Gangadhar Narsingdas Agrawal (HUF), at survey No: 62 of Ingaladalu Village of Chitradurga District, from out of the sanctioned 9.90 M.W. capacity of M/s Kurumaradikere Energy Limited, (earlier name M/s Windia Power Limited).

(3) The proposal has been examined and pass the following order:

**Government Order No: DE 226 NCE 2004, Bangalore, Dated: 14th July 2004.**

(4) Government are pleased to accord sanction for transfer of 2.50 M.W. Wind Power capacity in favour of M/s Gangadhar Narsingdas Agrawal (HUF) in the schedule indicated below, from out of 9.90 M.W. capacity of M/s Kurumaradikere Energy Limited allotted in the Government order dated: 12.8.2002.

**SCHEDULE**

| Sl.No. | Village Name | Taluk/District | Survey Number | Extent of area acres/gunta |
|---|---|---|---|---|
| 1 | Ingaladalu | Chitradurga | 62 | 2 acres |

(5) The terms and conditions of the original allotment made in the Government order read at (1) above are **IPSOFACTO** applicable.

By Order and in the Name of the Governor of Karnataka,

**K.L. JAYARAM**

P.R. 761 Under Secretary to Government, Energy Department.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಜೆ.ರಘು, ಪಿಎಸ್ಐ, ಗೋಕಾಕ್, ಬೆಳಗಾವಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬಿಜಾಪುರ ಜಿಲ್ಲೆ ರವರ ಆದೇಶ ಸಂಖ್ಯೆ: (a) ಸಿಬ್ಬಂದಿ/6/ಪಿಆರ್/189/2001 ದಿನಾಂಕ:8-4-2002 (b) ಸಿಬ್ಬಂದಿ/6/ ಪಿಆರ್/201/2001 ಓಬಿ ಸಂ.120/2002 ದಿನಾಂಕ:4-4-2002 (c) ಸಿಬ್ಬಂದಿ/6/ಪಿಆರ್/180/2001 ಓಬಿ ಸಂ.119/2002 ದಿ: 4.4.2002.

2. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾಂ ರವರ ಆದೇಶ ಸಂಖ್ಯೆ:(a) ಅಪೀಲು/38/ಉವ/2002 ದಿನಾಂಕ:16-9-2002 (b) ಸಂ/37/ಅಪೀಲು/ಉವ/2002 ದಿನಾಂಕ:16.9.2002 (c) ಅಪೀಲು/36/ ಉವ/2002 ದಿನಾಂಕ:16-9-2002.

3. ಅರ್ಜಿದಾರರ ಮನವಿ ದಿನಾಂಕ:13-3-2003.

4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(2) 7/2003-04 ದಿನಾಂಕ:8-9-2003.

**ಪ್ರಸ್ತಾವನೆ:**

ಶ್ರೀ ಜೆ.ರಘು, ಪಿಎಸ್ಐ, ಗೋಕಾಕ್, ಬೆಳಗಾವಿ ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಗಳಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965ರ ನಿಯಮ 7ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

ಆರೋಪ (1): "ಮೇಲಾಧಿಕಾರಿಗಳು ಬಿಜಾಪುರ ನಗರದಲ್ಲಿ ಸಂಚಾರ ವ್ಯವಸ್ಥೆಯನ್ನು ಸುಧಾರಿಸಲು ಕ್ರಮ ಕೈಗೊಳ್ಳಲು ಸೂಚಿಸಿದರೂ ಪಾಲಿಸದೇ ಕರ್ತವ್ಯಚ್ಯುತಿ ಪ್ರದರ್ಶಿಸಿದ ಬಗ್ಗೆ."

ಆರೋಪ (2): "ಕೇಂದ್ರಸ್ಥಾನ ಬಿಡಬಾರದೆಂದು ಸೂಚನೆ ನೀಡಿದ್ದರೂ ಕೇಂದ್ರಸ್ಥಾನ ಬಿಟ್ಟು ಹೋದ ಬಗ್ಗೆ."

ಆರೋಪ (3): "ಗೂಡ್ಸ್‌ಗಾಡಿಗಳಲ್ಲಿ ಜನರನ್ನು ತುಂಬಬಾರದೆಂದು ಆದೇಶವಿದ್ದರೂ ತಡೆಗಟ್ಟದಿರುವ ಆಪಾದನೆ ಬಗ್ಗೆ."

ಮೇಲ್ಕಂಡ ಆರೋಪಗಳ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿಗಳು (1)ನೇ ಆರೋಪಕ್ಕೆ "ವಾಗ್ದಂಡನೆ" ಶಿಕ್ಷೆ ವಿಧಿಸಿದ್ದು, ಅದನ್ನು ಮೇಲ್ಮನವಿ ಪ್ರಾಧಿಕಾರಿ ಮುಂದಿನ ವಾರ್ಷಿಕ ವೇತನಬಡ್ತಿಯನ್ನು 3 ತಿಂಗಳ ಕಾಲ ಸಂಚಿತಪರಿಣಾಮ ರಹಿತವಾಗಿ ಮುಂದೂಡಿರುತ್ತಾರೆ. (2)ನೇ ಆರೋಪಕ್ಕೆ ವಿಧಿಸಿದ್ದ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 3 ತಿಂಗಳ ಕಾಲ ಮುಂದೂಡಿದ ಶಿಕ್ಷೆಯನ್ನು ಮೇಲ್ಮನವಿ ಪ್ರಾಧಿಕಾರಿ ಸ್ಥಿರೀಕರಿಸಿರುತ್ತಾರೆ. (3)ನೇ ಆರೋಪಕ್ಕೆ ಶಿಸ್ತು ಪ್ರಾಧಿಕಾರಿಗಳು ವಿಧಿಸಿದ್ದ "ಅಮಾನತ್ತು" ಶಿಕ್ಷೆಗೆ ಬದಲಾಗಿ ಮೇಲ್ಮನವಿ ಪ್ರಾಧಿಕಾರಿ ಅವರ ಮುಂದಿನ ವಾರ್ಷಿಕ ವೇತನಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 6 ತಿಂಗಳ ಕಾಲ ಮುಂದೂಡಿರುತ್ತಾರೆ.

ಈ ಮೂರು ಶಿಕ್ಷೆಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು, ಅವರ ಮೇಲಿನ ಆಪಾದನೆಯನ್ನು ಅಲ್ಲಗಳೆಯುವಂತಹ ಯಾವುದೇ ವಾದಾಂಶವನ್ನು ಮಂಡಿಸಿರುವುದಿಲ್ಲ. ಅರ್ಜಿದಾರರು ಎಸಗಿರುವ ತಪ್ಪುಗಳಿಗೆ ವಿಧಿಸಿರುವ ಶಿಕ್ಷೆಗಳು ಅತ್ಯಲ್ಪವೆಂದು ಪರಿಗಣಿಸಿ, ಸರ್ಕಾರವು ಹಸ್ತಕ್ಷೇಪ ಮಾಡದಿರಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 49 ಪೊಸಿಅ 2003, ಬೆಂಗಳೂರು, ದಿನಾಂಕ: 9ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ.ರಘು, ಪಿಎಸ್ಐ, ಗೋಕಾಕ್, ಬೆಳಗಾಂ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 762 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇ ಲಾಖೆ, (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಇ ಬ್ರಾಹಿಂಖಾನ್, ಮಾಜಿ ಪಿಸಿ 1042, ಶಿವಮೊಗ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಶಿವಮೊಗ್ಗ ಜಿಲ್ಲೆ ರವರ ಆದೇಶ ಸಂಖ್ಯೆ: ಡಿಇ /10/2000 ಓಬಿ ಸಂ.74/2001-02 ದಿನಾಂಕ:25-5-2001.
2. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ರವರ ಹಿಂಬರಹ ಸಂ.:ಸಿಬ್ಬಂದಿ(2)/25/2003-04 ದಿನಾಂಕ:9-7-2003.
3. ಅರ್ಜಿದಾರರ ಮನವಿ ದಿನಾಂಕ:21-10-2003.
4. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ:ಅಪೀಲು(2) 98/2003-04 ದಿನಾಂಕ:30-4-2004.

**ಪ್ರಸ್ತಾವನೆ:**

ಶ್ರೀ ಇ ಬ್ರಾಹಿಂಖಾನ್, ಸಿಪಿಸಿ 104, ಹೊಸನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ರವರ ವಿರುದ್ಧ (ಇ ನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965ರ ನಿಯಮ 6ರಡಿ ಇ ಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಸಿಪಿಸಿ 1042, ಇ ಬ್ರಾಹಿಂಖಾನ್, ಹೊಸನಗರ ಠಾಣೆ ರವರು ದಿನಾಂಕ: 9-1-2000ರಿಂದ 12-1-2000ರವರೆಗೆ ಆಕಸ್ಮಿಕ ರಜೆ ಮಂಜೂರು ಮಾಡಿಸಿಕೊಂಡು ಹೋದವರು ದಿನಾಂಕ:13-1-2000ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿದ್ದವರು ಹಾಜರಾಗದೇ ಅನಧಿಕೃತವಾಗಿ ಗೈರುಹಾಜರಾಗಿದ್ದು, ಜಿಲ್ಲಾ ಪೊಲೀಸ್ ಕಛೇರಿಯಿಂದ ಹೊರಡಿಸಿದ ಪರಾರಿ ಪತ್ರವನ್ನು ಸ್ವೀಕರಿಸಿ ಕೊಂಡರೂ ಕರ್ತವ್ಯಕ್ಕೆ ಹಾಜರಾಗದೇ, ತಮ್ಮ ಇ ರುವಿಕೆಯ ಬಗ್ಗೆ ಯಾವುದೇ ಮಾಹಿತಿ ನೀಡದೇ, ಶಿಸ್ತಿನ ಇ ಲಾಖೆಯ ನೌಕರನಿಗೆ ಸಲ್ಲದ ದುರ್ನಡತೆ ಪ್ರದರ್ಶಿಸಿದ ಆರೋಪ."

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರು ಇ ಲಾಖಾ ವಿಚಾರಣೆಯಲ್ಲಿ ಭಾಗವಹಿಸದೇ ಇ ದ್ದುದರಿಂದ ಏಕಪಕ್ಷೀಯವಾಗಿ ನಿರ್ಣಯ ತೆಗೆದುಕೊಂಡಿದ್ದು, ಶಿಸ್ತು ಪ್ರಾಧಿಕಾರಿ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು "ಕಾಲವಿಳಂಬಿತ ಅರ್ಜಿ" ಯೆಂದು ಹಿಂಬರಹ ನೀಡಿರುತ್ತಾರೆ. ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ನೇರವಾಗಿ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಆದಾಗ್ಯೂ ಇ ವರ ಪರವಾಗಿ ಹೊಸನಗರದ ಶಾಸಕರು ನೀಡಿದ ಮನವಿಯ ಆಧಾರದ ಮೇಲೆ ಪರಿಷ್ಕರಣ ಮೇಲ್ಮನವಿ ಅರ್ಜಿಯೆಂದು ಪರಿಗಣಿಸಿ ಇ ಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಅರ್ಜಿದಾರರು 1996ರಲ್ಲಿ ಸೇವೆಗೆ ಸೇರಿದ್ದು, ಕೇವಲ 4 ವರ್ಷಗಳ ಸೇವೆಯ ನಂತರ ಸುದೀರ್ಘವಾಗಿ ಗೈರು ಹಾಜರಾಗಿದ್ದುದು ಇ ವರ ಕರ್ತವ್ಯ ನಿರ್ಲಕ್ಷತೆಯನ್ನು ಎತ್ತಿ ತೋರಿಸುತ್ತದೆ. ಪರಾರಿ ಪತ್ರ ಸ್ವೀಕರಿಸಿದರೂ ಸಹ ಸ್ಪಂದಿಸಿರುವುದಿಲ್ಲ. ಇ ಲಾಖಾ ವಿಚಾರಣೆಯಲ್ಲಿಯೂ ಸಹ ಭಾಗಿಯಾಗಿರುವುದಿಲ್ಲ. ಶಿಸ್ತಿನ ಇ ಲಾಖೆಯಲ್ಲಿ ಸೂಕ್ತವಾಗಿ ಕಾರ್ಯನಿರ್ವಹಿಸುವ ಯಾವುದೇ ಕುರುಹನ್ನೂ ತೋರಿರುವುದಿಲ್ಲ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 221 ಪೊಸಿಅ 2003, ಬೆಂಗಳೂರು, ದಿನಾಂಕ: 8ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಇ ಬ್ರಾಹಿಂಖಾನ್, ಸಿಪಿಸಿ 104, ಹೊಸನಗರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 763 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇ ಲಾಖೆ, (ಪೊಲೀಸ್ ಸೇವೆಗಳು).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಶಬ್ಬೀರ್ ಅಹ್ಮದ್, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕೈಗಾರಿಕಾ ಕೇಂದ್ರ, ಕುಷ್ಟಗಿ, ಕೊಪ್ಪಳ ಜಿಲ್ಲೆ, ಇವರ ಅರ್ಹತಾ ಪೂರ್ವ ಅವಧಿಯ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಡಳಿತ/ಸಿಬ್ಬಂದಿ/ಇ1/461/2003-04, ದಿನಾಂಕ: 29.03.2004.

**ಪ್ರಸ್ತಾವನೆ:**

ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಶ್ರೀ ಶಬ್ಬೀರ್ ಅಹ್ಮದ್, ಇವರನ್ನು ತಾಲ್ಲೂಕು ಕೈಗಾರಿಕಾ ಕೇಂದ್ರ ಕುಷ್ಟಗಿ, ಕೊಪ್ಪಳ ಜಿಲ್ಲೆ, ಇಲ್ಲಿ ಅನುಕಂಪದ ಆಧಾರದ ಮೇಲೆ ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ದಿನಾಂಕ: 25.06.1998 ರಂದು ನೇಮಕ ಮಾಡಲಾಗಿದ್ದು ಅದರಂತೆ ಶ್ರೀಯುತರು ದಿನಾಂಕ: 06.07.1998ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿದ್ದು ಇವರು ದಿನಾಂಕ: 05.7.2000 ರವರೆಗೆ ಅರ್ಹತಾಪೂರ್ವಾ ಅವಧಿಯಲ್ಲಿದ್ದು, ಶ್ರೀಯುತರು 2 ವರ್ಷದ ಅರ್ಹತಾ ಪೂರ್ವ ಅವಧಿಯೊಳಗೆ ನಿಗದಿತ ಇಲಾಖಾ ಪರೀಕ್ಷೆ ಅಕೌಂಟ್ಸ್ ಲೋಯರ್ ತೇರ್ಗಡೆಯಾಗದ ಕಾರಣ ನಿರ್ದೇಶಕರ ಕಛೇರಿ ಆದೇಶ ದಿನಾಂಕ: 22.12.2003 ರಂದು ಸದರಿ ನೌಕರರ ಅರ್ಹತಾಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರ್) ನಿಯಮಗಳು 1977ರ ನಿಯಮ 4(1) (ii) ರನ್ವಯ ಒಂದು ವರ್ಷ ಅಂದರೆ ದಿನಾಂಕ: 06.07.2000 ರಿಂದ 05.07.2001 ರವರೆಗೆ ವಿಸ್ತರಿಸಿದ್ದು, ತದನಂತರ ಸದರಿ ನೌಕರರು ಲೋಕಸೇವಾ ಆಯೋಗ ನಡೆಸಿದ ಇಲಾಖಾ ಪರೀಕ್ಷೆಯಾದ ಅಕೌಂಟ್ಸ್ ಹೈಯರ್‌ಗೆ ದಿನಾಂಕ: 16.1.2002 ರಂದು ಹಾಜರಾಗಿ ತೇರ್ಗಡೆಯಾಗಿದ್ದು ಸದರಿ ಪರೀಕ್ಷೆ ಫಲಿತಾಂಶವು ಕರ್ನಾಟಕ ರಾಜ್ಯ ಪತ್ರ ದಿನಾಂಕ: 09.05.2002 ರಂದು ಪ್ರಕಟವಾಗಿದ್ದು, ಈ ಹಿನ್ನೆಲೆಯಲ್ಲಿ ಸದರಿ ನೌಕರರ ಅರ್ಹತಾಪೂರ್ವ ಅವಧಿಯನ್ನು ದಿನಾಂಕ: 06.07.2001 ರಿಂದ 09.05.2002 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಗಳು 1977ರ ನಿಯಮ 4(1) ರನ್ವಯ ಸರ್ಕಾರದ ಹಂತದಲ್ಲಿ ವಿಸ್ತರಿಸಿ ಆದೇಶ ನೀಡುವಂತೆ ಕೋರಿರುವರು.

ಈ ನೌಕರರ ಸೇವಾ ಪುಸ್ತಕ ಸಂಬಂಧಪಟ್ಟ ಮೂಲ ದಾಖಲೆಗಳ ಪ್ರತಿಗಳ ಹಾಗೂ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

### ಸರ್ಕಾರಿ ಆದೇಶ ಸಂಖ್ಯೆ: ವಾಕೈ 52 ಕೈಸೇವಿ 2004, ಬೆಂಗಳೂರು, ದಿನಾಂಕ: 17ನೇ ಜುಲೈ 2004

ಶ್ರೀ ಶಬ್ಬೀರ್ ಅಹ್ಮದ್, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕೈಗಾರಿಕಾ ಕೇಂದ್ರ, ಕುಷ್ಟಗಿ, ಕೊಪ್ಪಳ ಜಿಲ್ಲೆ, ಇವರ ಅರ್ಹತಾಪೂರ್ವ ಅವಧಿಯನ್ನು ದಿನಾಂಕ: 06.07.2001 ರಿಂದ 09.05.2002 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಗಳು 1977ರ ನಿಯಮ 4(1)ರ ಮೇರೆಗೆ ಸರ್ಕಾರವು ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 764

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕೈಗಾರಿಕಾ ಸೇವೆಗಳು).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀಮತಿ ಬಿ.ವಂಶಿರೆಡ್ಡಿ, ಸಹಾಯಕ ಕೃಷಿ ಅಧಿಕಾರಿ, ಉಪ ಕೃಷಿ ನಿರ್ದೇಶಕರ ಕಚೇರಿ (ಕ್ಷೇತ್ರ ಪ್ರಯೋಗ) ಬೆಂಗಳೂರು ಇ ವರ ಅನಧಿಕೃತ ಗೈರುಹಾಜರಿ ಬಗ್ಗೆ ಆದೇಶ.

**ಓದಲಾಗಿದೆ:** 1. ಜಂಟಿ ನಿರ್ದೇಶಕರು (ಆಡಳಿತ) ಇ ವರ ವರದಿ ಸಂಖ್ಯೆ: ಇ ಎಸ್‌ಟಿ 1 ಐಎನ್‌ಕ್ಯೂ(1)17:2002-03 ದಿನಾಂಕ:23-6-2003: 4-7-2003 ಮತ್ತು ದಿನಾಂಕ:19:24-3-2004.

2. ಕಾರಣ ಕೇಳುವ ನೋಟೀಸು ಸಂಖ್ಯೆ: ಇ ಎಸ್‌ಟಿ 1 ಐಎನ್‌ಕ್ಯೂ (1)17:2002-03 ದಿನಾಂಕ:2-1-2003.

**ಪ್ರಸ್ತಾವನೆ:-**

ಮೇಲೆ (1) ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಜಂಟಿ ಕೃಷಿ ನಿರ್ದೇಶಕರು (ಆಡಳಿತ) ರವರು ಶ್ರೀಮತಿ ಬಿ.ವಂಶಿರೆಡ್ಡಿ, ಸಹಾಯಕ ಕೃಷಿ ಅಧಿಕಾರಿ, ಉಪಕೃಷಿ ನಿರ್ದೇಶಕರ ಕಚೇರಿ (ಕ್ಷೇತ್ರ ಪ್ರಯೋಗ) ಬೆಂಗಳೂರು ಇ ವರು ದಿನಾಂಕ:21-01-2002 ರಿಂದ 20-04-2002 ರವರೆಗೆ ವೈದ್ಯಕೀಯ ಕಾರಣದ ಮೇಲೆ ರಜೆ ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿ ಹೋದವರು ಕೋರಿದ ರಜೆ ಅವಧಿ ಮುಗಿದಿದ್ದರೂ ದಿನಾಂಕ:21-04-2002 ರಿಂದ ಇ ಲ್ಲಿಯವರೆಗೆ ಕರ್ತವ್ಯಕ್ಕೆ ಹಾಜರಾಗದೆ, ಮೇಲೆ ಸಲ್ಲಿಸಿದ ವೈದ್ಯಕೀಯ ರಜೆಗೆ ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸದೆ ಹಾಗೂ ಸಕ್ಷಮ ಪ್ರಾಧಿಕಾರದಿಂದ ರಜೆ ಮಂಜೂರು ಮಾಡಿಸಿಕೊಳ್ಳದೆ ಸೇವೆಗೆ ಅನಧಿಕೃತ ಗೈರು ಹಾಜರಿ ಆದಕಾರಣ, ಅವರ ವಾಸದ ವಿಳಾಸಕ್ಕೆ ಅಂಚೆ ಮೂಲಕ ಕಳುಹಿಸಿ ಕೊಡಲಾದ ತಿಳುವಳಿಕೆ:ಮರುಕರೆ ಪತ್ರಗಳುಳ್ಳ ಲಕೋಟೆಗಳು ಅವರಿಂದ ಸ್ವೀಕೃತವಾಗದೆ ವಿಳಾಸದಾರರು 4 ತಿಂಗಳು: 6 ತಿಂಗಳು ಭಾರತ ಬಿಟ್ಟು ಹೋಗಿದ್ದಾರೆಂಬ ಹಿಂಬರಹದೊಂದಿಗೆ ವಾಪಸ್ಸು ಬಂದಿರುತ್ತವೆಂದು, ಉಪ ಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ) ಬೆಂಗಳೂರು ರವರು ದಿನಾಂಕ: 21-08-2002 ರ ಪತ್ರದಲ್ಲಿ ವರದಿ ಮಾಡಿದ್ದಾರೆಂದು ತಿಳಿಸಿದ್ದಾರೆ.

ಶ್ರೀಮತಿ ಬಿ.ವಂಶಿರೆಡ್ಡಿರವರು ಈ ಹಿಂದೆ ಕೃಷಿ ಅಧಿಕಾರಿ ಕಚೇರಿ (ಮಣ್ಣು ಆರೋಗ್ಯ ಕೇಂದ್ರ)ಬೆಂಗಳೂರು ಇ ಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:19-05-2001 ರಿಂದ 19-10-2001 ರವರೆಗೆ ಅನಧಿಕೃತ ಗೈರುಹಾಜರಿ ಆಗಿರುವುದು ಕೃಷಿ ಅಧಿಕಾರಿ (ಮಣ್ಣು ಆರೋಗ್ಯ ಕೇಂದ್ರ) ಬೆಂಗಳೂರು ಇ ವರ ದಿನಾಂಕ: 24-10-2002ರ ಪತ್ರದ ರೀತ್ಯಾ ವರದಿಯಾಗಿರುತ್ತದೆಂದು ತಿಳಿಸುತ್ತಾ, ಈ

ಅಧಿಕಾರಿ ಈ ರೀತಿ ಪೂರ್ವಾನುಮತಿ ಪಡೆಯದೆ, ವೈದ್ಯಕೀಯ ಪ್ರಮಾಣ ಪತ್ರ ಸಲ್ಲಿಸದೆ ಸೇವೆಗೆ ಅನಧಿಕೃತ ಗೈರುಹಾಜರಿಯಾದ ಆಪಾದನೆಯ ಮೇಲೆ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಡನೆ ಶ್ರೀಮತಿ ಬಿ.ವಂಶಿರೆಡ್ಡಿ ರವರಿಗೆ ಜಾರಿಮಾಡಲು ಮೇಲೆ (2) ರಲ್ಲಿ ಓದಲಾದ ದಿನಾಂಕ:02-01-2003ರಂದು ಉಪಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ) ಬೆಂಗಳೂರು ಇವರಿಗೆ ಕಳುಹಿಸಿ ಕೊಡಲಾಗಿದ್ದು, ಸದರಿ ಆಪಾದಿತರ ವಾಸದ ವಿಳಾಸಕ್ಕೆ ಅಂಚೆ ಮೂಲಕ ಕಳುಹಿಸಿಕೊಡಲಾದ ದೋಷಾರೋಪಣಾ ಪಟ್ಟಿಯ ಲಕೋಟೆಯು ಅವರಿಂದ ಸ್ವೀಕೃತವಾಗದೆ ವಿಳಾಸದಾರರು ಭಾರತ ಬಿಟ್ಟಿದ್ದಾರೆ ಎಂಬ ಹಿಂಬರಹದೊಂದಿಗೆ ವಾಪಸ್ಸು ಬಂದಿರುತ್ತದೆಂದು ಉಪಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ) ಬೆಂಗಳೂರು ರವರು ದಿನಾಂಕ:25-01-2003 ರಂದು ವರದಿ ಮಾಡಿದ್ದಾರೆಂದು, ಈ ದೋಷಾರೋಪಣಾ ಪಟ್ಟಿಯನ್ನು ಪಡೆಯುವಂತೆ ಜನವಾಹಿನಿ ದಿನಪತ್ರಿಕೆಯಲ್ಲಿ ದಿನಾಂಕ:20-02-2003 ಹಾಗೂ ಪ್ರಜಾವಾಣಿ ದಿನ ಪತ್ರಿಕೆಯಲ್ಲಿ ದಿನಾಂಕ:21-2-2003 ರಂದು ಪ್ರಕಟಿಸಲಾಗಿದ್ದು, ಸದರಿಯವರು ಕರ್ತವ್ಯಕ್ಕೆ ಹಾಜರಾಗುವುದಾಗಲೀ ಅಥವಾ ದೋಷಾರೋಪಣಾ ಪಟ್ಟಿಯನ್ನು ಪಡೆಯುವುದಾಗಲೀ ಮಾಡಿಲ್ಲವೆಂದು ಉಪಕೃಷಿ ನಿರ್ದೇಶಕರು (ಕ್ಷೇತ್ರ ಪ್ರಯೋಗ) ಬೆಂಗಳೂರು ರವರು ದಿನಾಂಕ: 24-03-2003 ರಂದು ವರದಿ ಮಾಡಿರುತ್ತಾರೆ. ಈ ಅಧಿಕಾರಿಯ ವರ್ತನೆಯನ್ನು ಗಮನಿಸಿದಾಗ ಸರ್ಕಾರೀ ಸೇವೆಯಲ್ಲಿ ಮುಂದುವರೆಯುವ ಆಸಕ್ತಿ ಇಲ್ಲವೆಂದು ತೋರುವುದರಿಂದ, ಅಲ್ಲದೆ ವಿಚಾರಣೆ ನಡೆಸಲು ಸಾಧ್ಯವಾಗದೆ ಇರುವುದರಿಂದ ಸಿ.ಸಿ.ಎ. ನಿಯಮ 14(ii) ರ ಪ್ರಕಾರ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಬಹುದಾಗಿದೆಯೆಂದು ಕೃಷಿ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಸರ್ಕಾರವು ಕೃಷಿ ಆಯುಕ್ತರು ಸಲ್ಲಿಸಲಾದ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಶ್ರೀಮತಿ ಬಿ.ವಂಶಿರೆಡ್ಡಿಯವರು ದಿನಾಂಕ:21-1-2002ರಿಂದ 20-4-2002 ರವರೆಗೆ ವೈದ್ಯಕೀಯ ಕಾರಣದ ಮೇಲೆ ರಜೆ ಮಂಜೂರು ಮಾಡುವಂತೆ ಅರ್ಜಿ ಸಲ್ಲಿಸಿ ಹೋಗಿದ್ದು, ರಜೆ ಮುಗಿಸಿದ ನಂತರ ದಿನಾಂಕ:21-04-2002 ರಿಂದ ಇಲ್ಲಿಯವರೆಗೆ ಯಾವುದೇ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ, ವೈದ್ಯಕೀಯ ಪ್ರಮಾಣಪತ್ರಗಳನ್ನು ಹಾಜರುಪಡಿಸದೆ, ಸೇವೆಗೆ ಅನಧಿಕೃತ ಗೈರುಹಾಜರಿರುವುದು ಅಲ್ಲದೆ ಇವರಿಗೆ ಜಾರಿಮಾಡಲಾದ ಮರುಕರೆ ನೋಟೀಸು ಹಾಗೂ ದೋಷಾರೋಪಣಾ ಪಟ್ಟಿಗಳನ್ನು ಸ್ವೀಕರಿಸಿದ ಕಾರಣ ಅವರು ಭಾರತ ಬಿಟ್ಟು ಹೋಗಿದ್ದಾರೆಂಬ ಹಿಂಬರಹದೊಂದಿಗೆ ವಾಪಸ್ಸು ಬಂದಿರುವುದರಿಂದ ಇವರ ವಿರುದ್ಧ ವಿಚಾರಣೆ ನಡೆಸಲು ಆಪಾದಿತರು ವಿಚಾರಣೆಯಲ್ಲಿ ಪಾಲುಗೊಳ್ಳುತ್ತಿಲ್ಲವಾದ್ದರಿಂದ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮ 14(ii) ರ ಪ್ರಕಾರ ದಂಡನೆ ವಿಧಿಸಬಹುದಾಗಿದ್ದು, ಇವರನ್ನು ಸರ್ಕಾರಿ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ:ಕೃತೋಇ 55 ಕೃಪವಿ 2003,ಬೆಂಗಳೂರು,ದಿನಾಂಕ: 13ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14 (ii) ರನ್ವಯ ಹಾಗೂ 8 (vii) ರನ್ವಯ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಶ್ರೀಮತಿ ಬಿ.ವಂಶಿರೆಡ್ಡಿ, ಸಹಾಯಕ ಕೃಷಿ ಅಧಿಕಾರಿ, ಉಪ ಕೃಷಿ ನಿರ್ದೇಶಕರ ಕಚೇರಿ (ಕ್ಷೇತ್ರ ಪ್ರಯೋಗ) ಬೆಂಗಳೂರು ರವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 765 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2003-04ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿತರಾದ ವೈದ್ಯಕೀಯ ಶಿಕ್ಷಣ ಇಲಾಖೆಯ ಉಪನ್ಯಾಸಕರುಗಳಿಗೆ ಸ್ಟೈಫಂಡ್ ಮಂಜೂರಾತಿ ಮತ್ತು ಸಂಬಳದ ಬಟವಾಡೆ.

**ಓದಲಾಗಿದೆ:**
1. ದಿನಾಂಕ: 09.07.2003 ಸಂಖ್ಯೆ: ಆಕುಕ 111 ಎಂಪಿಎಸ್ 2002(ಭಾ)ರ ಸರ್ಕಾರಿ ಆದೇಶ.
2. ದಿನಾಂಕ: 05.11.2003 ಸಂಖ್ಯೆ: ಆಕುಕ 111 ಎಂಪಿಎಸ್ 2003ರ ಸರ್ಕಾರಿ ಆದೇಶ.
3. ದಿನಾಂಕ: 12.02.2004 ಸಂಖ್ಯೆ: ಎಸ್‌ಆರ್‌ಓ(2)190:2002-03ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.
4. ದಿನಾಂಕ: 8.01.2004 ಸಂಖ್ಯೆ: ಎಸ್‌ಆರ್‌ಓ (2) 196:2002-03ರ ವೈದ್ಯಕೀಯ ನಿರ್ದೇಶಕರ ಪತ್ರ.
5. ದಿನಾಂಕ: 17.03.2004 ಸಂಖ್ಯೆ: ಎಂಇಹೆಚ್ (3) 30:2003-04ರ ವೈದ್ಯಕೀಯ ನಿರ್ದೇಶಕರ ಪತ್ರ.

**ಪೀಠಿಕೆ:**

1. ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಮೈಸೂರು ವೈದ್ಯಕೀಯ ಕಾಲೇಜಿನ 19 ಉಪನ್ಯಾಸಕರುಗಳನ್ನು ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸ್‌ಗಳ ವ್ಯಾಸಂಗಕ್ಕಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 61ನೇ ನಿಯಮದೊಂದಿಗೆ ಓದಲಾದ ಅಪೆಂಡಿಕ್ಸ್ II-A-Iನೇ ನಿಯಮ ಹಾಗೂ 2003ರ ಕರ್ನಾಟಕ ಸ್ನಾತಕೋತ್ತರ ವೈದ್ಯಕೀಯ ಮತ್ತು ದಂತ ಪದವಿ ಹಾಗೂ ಡಿಪ್ಲೊಮೋ ಕೋರ್ಸ್‌ಗಳ ಪ್ರವೇಶಕ್ಕಾಗಿ ಪ್ರವೇಶ ಪರೀಕ್ಷೆ ನಡೆಸುವಿಕೆ ನಿಯಮಾವಳಿಯ 12(2)ನೇ ನಿಯಮದಡಿ ನಿಯೋಜಿಸಲಾಗಿದೆ.

2. ಮೇಲ್ಕಂಡ ಅಪೆಂಡಿಕ್ಸ್ II-A-Iನೇ ಶೀರ್ಷಿಕೆಯ 8(ಬಿ) ನಿಯಮದಡಿ ಲಭ್ಯವಾಗುವ ದಿನಭತ್ಯೆಗೆ ಅರ್ಧದಷ್ಟು ಸಮನಾದ ಸ್ಟೈಫಂಡ್ ಪಾವತಿ ಮಾಡಲು ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆಯಿಂದ ಸ್ನಾತಕೋತ್ತರ ವೈದ್ಯಕೀಯ ಪದವಿ ಕೋರ್ಸ್‌ಗಳಿಗೆ ನಿಯೋಜಿತರಾದ ಉಪನ್ಯಾಸಕರುಗಳಿಗೆ ಅವರ ಸಂಬಳವನ್ನು ಅವರು ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಕಛೇರಿಯಲ್ಲಿ ಅಥವಾ ಅವರನ್ನು ಯಾವ ಕಾಲೇಜಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆಯೋ ಅಂತಹ ಕಛೇರಿಯ ಡ್ರಾಯಿಂಗ್ ಅಂಡ್ ಡಿಸ್‌ಪರ್ಸಿಂಗ್ ಆಫೀಸರ್ ಎಂದು ಪದನಾಮೀಕರಿಸಲು ಅಥವಾ ಕಛೇರಿಯ ಮುಖ್ಯಸ್ಥರು ಡ್ರಾ ಮಾಡಿ ಬಟವಾಡೆ ಮಾಡಲು ಮಂಜೂರಾತಿ ನೀಡುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 111 ಎಂಪಿಎಸ್ 2003, ಬೆಂಗಳೂರು, ದಿನಾಂಕ: 13ನೇ ಜುಲೈ 2004**

3. 2003-04ನೇ ಸಾಲಿನಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯಿಂದ ವೈದ್ಯಕೀಯ ಸ್ನಾತಕೋತ್ತರ ಪದವಿಕೋರ್ಸ್‌ಗಳಿಗೆ ನಿಯೋಜಿತರಾದ ಉಪನ್ಯಾಸಕರುಗಳಿಗೆ ಅವರ ಸ್ನಾತಕೋತ್ತರ ಪದವಿ ವ್ಯಾಸಂಗದ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್ II-A-Iನೇ ನಿಯಮದ 8(ಬಿ) ಉಪನಿಯಮದಡಿ ಲಭ್ಯವಿರುವ ದಿನಭತ್ಯೆಯ ಅರ್ಧದಷ್ಟು ಸಮನಾದ ಸ್ಟೈಫಂಡ್‌ನ್ನು ಮಾತ್ರ ಅದರಲ್ಲಿ ನಿಗದಿಪಡಿಸಿರುವ ಷರತ್ತುಗಳಿಗೆ ಒಳಪಡಿಸಿ ಪಾವತಿ ಮಾಡಲು ಮಂಜೂರಾತಿ ನೀಡಲಾಗಿದೆ. ಅವರುಗಳು ಇತರೆ ಯಾವುದೇ ಸ್ಟೈಫಂಡಿಗೆ ಅರ್ಹರಾಗಿರುವುದಿಲ್ಲ.

4. ಅವರುಗಳ ವೇತನ ಭತ್ಯೆಗಳನ್ನು ಈ ಕೆಳಕಂಡಂತೆ ಡ್ರಾಮಾಡಿ ಬಟವಾಡೆ ಮಾಡಲು ಆದೇಶಿಸಲಾಗಿದೆ.

"The Officers have been deputed to Private Medical Colleges and their salaries have to be therefore, drawn and disbursed by the Drawing and Disbursing Officers from which they have been deputed. In case, their posts are filled, they have to be shown a posting and the Drawing and Disbursing Officers/Head of Office to which they have been attached will draw their salary"

5. ಮೇಲ್ಕಂಡಂತೆ ಉಪನ್ಯಾಸಕರುಗಳ ಪ್ರತಿತಿಂಗಳ ಸಂಬಳವನ್ನು ಅವರು ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಕಛೇರಿಯಲ್ಲಿ ಅಥವಾ ಅವರನ್ನು ಯಾವ ಕಛೇರಿಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆಯೋ ಅಂತಹ ಕಛೇರಿಯಿಂದ Drawing and Disbursing Officers ಅಥವಾ ಕಛೇರಿಯ ಮುಖ್ಯಸ್ಥರು ಡ್ರಾ ಮಾಡಿ ಬಟವಾಡೆ ಮಾಡಲು ಮಂಜೂರಾತಿ ನೀಡಲಾಗಿದೆ.

6. ದಿನಾಂಕ: 27.06.2003 ಸಂಖ್ಯೆ: ಆಇ 895 ವೆಚ್ಚ-5:2003, 23.04.2004 ಸಂಖ್ಯೆ: ಆಇ 739:ವೆಚ್ಚ-5:2004 ಮತ್ತು 26.06.2004 ಸಂಖ್ಯೆ: ಆಇ 989 ವೆಚ್ಚ-5:2004ರ ಅನಧಿಕೃತ ಟಿಪ್ಪಣಿಗಳಲ್ಲಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ನಾಗರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಪಿ.ಆರ್. 766

## ಕಂದಾಯ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯ ಬರ ಉಸ್ತುವಾರಿ ಕೋಶವನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 382 ಟಿಎನ್‌ಆರ್ 2002, ದಿನಾಂಕ: 3.1.2003.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ದಿನಾಂಕ: 24.6.2003.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ದಿನಾಂಕ: 10.11.2003.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇತೃತ್ವದಲ್ಲಿ ಪ್ರತಿಯೊಂದು ಕಂದಾಯ ವಿಭಾಗದಲ್ಲಿನ ಬರಪರಿಸ್ಥಿತಿಯನ್ನು ಅವಲೋಕಿಸಲು ಬರ ಉಸ್ತುವಾರಿ ಕೋಶವನ್ನು ದಿನಾಂಕ: 1.12.2002 ರಿಂದ 30.6.2003 ರವರೆಗೆ ಸೃಜಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ದಿನಾಂಕ: 24.6.2003ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ: 1.7.2003 ರಿಂದ 31.12.2003 ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ದಿನಾಂಕ: 10.11.2003ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಮಾತ್ರ ಪೂರಕ ಸಿಬ್ಬಂದಿ ಸಹಿತ ದಿನಾಂಕ: 1.1.2004 ರಿಂದ 30.06.2004 ರವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ರಾಜ್ಯದಲ್ಲಿ ಪ್ರಸ್ತುತ ಇರುವ ಬರಪರಿಸ್ಥಿತಿಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರವು ಈಗಾಗಲೇ ಬಿಡುಗಡೆ ಮಾಡಿರುವ ಆಹಾರಧಾನ್ಯಗಳ ಬಳಕೆ ಹಾಗೂ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ಇನ್ನಿತರೆ ಉಳಿಕೆ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಈ ಬರ ಉಸ್ತುವಾರಿ ಕೋಶದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 369 ಟಿಎನ್‌ಆರ್ 2003, ಬೆಂಗಳೂರು, ದಿನಾಂಕ: 17ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ನೇರ ನೇತೃತ್ವದಲ್ಲಿರುವ ಬರ ಉಸ್ತುವಾರಿ ಕೋಶಕ್ಕೆ ಮಂಜೂರಾಗಿರುವ 4 ಹುದ್ದೆಗಳ ಪೈಕಿ ಕೇವಲ ಒಂದು ಹುದ್ದೆಯನ್ನು ಮಾತ್ರ ವಿಶೇಷಾಧಿಕಾರಿ (ಬರ ಉಸ್ತುವಾರಿ ಕೋಶ) ಪೂರಕ ಸಿಬ್ಬಂದಿ ಸಹಿತ ದಿನಾಂಕ: 1.7.2004 ರಿಂದ 31.12.2004 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2).

ಪಿ.ಆರ್. 767

## ENERGY SECRETARIAT

**Subject:** Permitting M/s Sandur Power Company Limited to treat 2x7.5 MW (15 MW) capacity as an independent scheme called Varahi Tail Race Mini Hydel Scheme-II - issue of order relating to.

**Read:**
1. Government Order No. DE 164 PPC 94(3) dated: 6.9.1994.
2. Government Order No. DE 238 NCE 94, dated: 10.12.2001.
3. Government Order No. DE 250 NCE 2003, dated: 15.11.2003.
4. Representation dated: 1.7.2004 of M/s Sandur Power Company Limited, Bangalore.

**PREAMBLE**:

In the Government Order dated: 6.9.2004 cited (1) above, M/s Sandur Power Company Limited, Bangalore has been permitted to set up 15 MW Varahi Tail Race Mini Hydel Project.

2. Further, in the Government Order dated: 10.12.2001 cited (2) above, the said capacity has been enhanced from 15 MW to 22.5 MW.

3. Further, based on the request of M/s. Sandur Power Company Limited, Bangalore and on the recommendation of karnataka Renewable Energy Development Limited in Government Order No.DE 250 NCE 2003, dated: 15.11.2003 cited at (3) above, sanction has been accorded to the said Company to add two units of 2x7.5 MW capacity to the said Project. Further, the said Company entered into agreement with Government of Karnataka on 4.2.2004.

4. Now, M/s Sandur Power Company Limited in its letter dated: 17.4.2004 has intimated even after adding 2x7.5 MW, there will not be any extra generation of power. Hence, the Company has requested to treat 2x7.5 MW capacity sanctioned in Government Order dated: 15.11.2003 as separate scheme called Varahi Tail Race Mini Hydel Scheme-II as per agreement dated: 4.2.2004.

5. The above proposal has been examined. Hence, the following order.

**Government Order No: EN 231 NCE 2004, Bangalore, Dated: 16th July 2004.**

In the circumstances explained above, and after careful consideration and in partial modification to the Government Order No.DE 250 NCE 2003, dated: 15.11.2003, Government hereby accords sanction to M/s Sandur Power Company Limited Bangalore to implement 15 MW (2x7.5) capacity Hydel Power Scheme as an Independent Scheme identified as Varahi Tail Race Mini Hydel Scheme-II.

The other conditions of Government Order dated: 15.11.2003 and the agreement entered into by M/s Sandur Power Company Limited with the Government on 4.2.2004 for this scheme shall continue.

By Order and in the Name of the Governor of Karnataka,

**K.L. JAYARAM**

P.R. 768 Under Secretary to Government, Energy Department.

## ಕಾರ್ಮಿಕ ಸಚಿವಾಲಯ

**ವಿಷಯ:** ಡಾ: ಜನಾರ್ಧನ್ ಐತಾಳ್, ಪಿ. ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ, ಇವರ ರಾಜೀನಾಮೆ ಅಂಗೀಕರಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ವೈದ್ಯರು:258: 2001-02, ದಿನಾಂಕ: 15:19.02.2002.
2) ಡಾ: ಜನಾರ್ಧನ್ ಐತಾಳ್ ಪಿ. ವಿಮಾ ವೈದ್ಯಾಧಿಕಾರಿಗಳು ಇವರ ರಾಜೀನಾಮೆ ಪತ್ರ ದಿನಾಂಕ: 10.02.2003.
3) ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್ಐಎಸ್:ಇವಿ:20:2002-03, ದಿನಾಂಕ: 07.11.2002 ಮತ್ತು 22.5.2003.

**ಪ್ರಸ್ತಾವನೆ:**

ಡಾ: ಜನಾರ್ಧನ್ ಪಿ. ಐತಾಳ್, ವಿಮಾ ವೈದ್ಯಾಧಿಕಾರಿ, ಕಾರಾವಿ ಯೋ (ವೈ) ಸೇವೆಗಳು ಇವರು ಕಾರಾವಿ ಆಸ್ಪತ್ರೆ, ಮಂಗಳೂರಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 01.03.2001 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದರು. ಸದರಿ ವೈದ್ಯರು ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡುವಂತೆ ಕೋರಿದಾಗ ನಿರ್ದೇಶಕರು, ಕಾರಾವಿ ಇವರು ಮೇಲೆ (1) ರಲ್ಲಿ ಓದಲಾದ ಅಧಿಕೃತ ಜ್ಞಾಪನಾ ಪತ್ರದಲ್ಲಿ ಇವರ ಅನಧಿಕೃತ ಗೈರುಹಾಜರಾತಿ ಬಗ್ಗೆ ಸರ್ಕಾರ ತೆಗೆದುಕೊಳ್ಳುವ ತೀರ್ಮಾನವನ್ನು ಕಾಯ್ದಿರಿಸಿ ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ ಇಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಿದ್ದರು. ಅದರಂತೆ ಸದರಿ ವೈದ್ಯರು ದಿನಾಂಕ: 4.4.2002 ರಂದು ಕರ್ತವ್ಯಕ್ಕೆ ಹಾಜರಾಗಿದ್ದರು.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 7.11.2002ರ ಪತ್ರದಲ್ಲಿ ಡಾ: ಜನಾರ್ಧನ್ ಪಿ. ಐತಾಳ್, ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ, ಇವರು ದಿನಾಂಕ: 1.3.2001 ರಿಂದ 3.4.2002ರ ವರೆಗಿನ ಅವಧಿಯಲ್ಲಿ ಖಾಯಂಪೂರ್ವ ಸೇವಾ ಅವಧಿಯಲ್ಲಿದ್ದಾಗಲೇ ಕರ್ತವ್ಯದಿಂದ ಅನಧಿಕೃತ ಗೈರುಹಾಜರಾದ್ದರಿಂದ ಇವರ ವಿರುದ್ಧ ಶಿಸ್ತು ಕ್ರಮ

ಕೈಗೊಳ್ಳಲು ದೋಷಾರೋಪಣೆ ಪಟ್ಟಿಯನ್ನು ರೂಪಿಸಿ ಕಳುಹಿಸಿದ್ದರು. ಈ ಮಧ್ಯ ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ: 22.5.2003ರ ಪತ್ರದಲ್ಲಿ ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ಇವರು ಡಾ: ಜನಾರ್ಧನ್ ಐತಾಳ್ ಪಿ. ವಿಮಾ ವೈದ್ಯಾಧಿಕಾರಿಗಳು, ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ ಇವರು ದಿನಾಂಕ: 7.1.2003 ರಿಂದ 31.3.2003ರ ವರೆಗೆ 84 ದಿನಗಳ ಸಂಯುಕ್ತ ರಜೆ ಕೋರಿದ್ದು ಸದರಿ ರಜೆಯನ್ನು ಮಂಜೂರು ಮಾಡಿಲ್ಲವೆಂದು ಹಾಗೂ ಇವರು ದಿನಾಂಕ: 10.02.2003ರ ತಮ್ಮ ರಾಜೀನಾಮೆ ಪತ್ರದಲ್ಲಿ ವೈಯಕ್ತಿಕ ಕಾರಣಗಳಿಂದಾಗಿ ಸರ್ಕಾರಿ ಸೇವೆಗೆ ರಾಜೀನಾಮೆ ನೀಡಿರುವುದಾಗಿ ತಿಳಿಸಿರುತ್ತಾರೆ. ಈ ವೈದ್ಯಾಧಿಕಾರಿಗಳಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಯಾವುದೂ ಇಲ್ಲದಿರುವುದರಿಂದ ಮತ್ತು ಇವರ ವಿರುದ್ಧ ದಿನಾಂಕ: 1.3.2001 ರಿಂದ 3.4.2002ರ ವರೆಗಿನ ಅನಧಿಕೃತ ಗೈರು ಹಾಜರಾತಿ ಬಗ್ಗೆ ಶಿಸ್ತು ಕ್ರಮ ಕೈಗೊಳ್ಳಲು ಉದ್ದೇಶಿಸಿದ್ದನ್ನು ಹೊರತುಪಡಿಸಿ ಬೇರಾವುದೇ ಇಲಾಖಾ ವಿಚಾರಣೆ ಬಾಕಿ ಇಲ್ಲದಿರುವುದರಿಂದ ಇವರು ಸರ್ಕಾರಿ ಸೇವೆಗೆ ಸಲ್ಲಿಸಿರುವ ರಾಜೀನಾಮೆಯನ್ನು ಸದರಿ ವೈದ್ಯರು ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 7.1.2003 ರಿಂದ ಅನ್ವಯವಾಗುವಂತೆ ಅಂಗೀಕರಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 321 ಎಲ್‌ಎಸ್‌ಐ 2002, ಬೆಂಗಳೂರು, ದಿನಾಂಕ: 16ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಡಾ: ಪಿ. ಜನಾರ್ಧನ್ ಐತಾಳ್, ವಿಮಾ ವೈದ್ಯಾಧಿಕಾರಿ, ಕಾರ್ಮಿಕ ರಾಜ್ಯ ವಿಮಾ ಆಸ್ಪತ್ರೆ, ಹುಬ್ಬಳ್ಳಿ, ಇವರು ಸರ್ಕಾರಿ ಸೇವೆಗೆ ಸಲ್ಲಿಸಿರುವ ರಾಜಿನಾಮೆಯನ್ನು ಇವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 07.01.2003 ರಿಂದ ಜಾರಿಗೆ ಬರುವಂತೆ ಅಂಗೀಕರಿಸಿದೆ, ಹಾಗೂ ಸದರಿ ದಿನಾಂಕದಿಂದ ಜಾರಿಗೆ ಬರುವಂತೆ ಸದರಿ ವೈದ್ಯರನ್ನು ಸೇವೆಯಿಂದ ಬಿಡುಗಡೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ್**

ಪಿ.ಆರ್. 769

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

## ಕಂದಾಯ ಸಚಿವಾಲಯ

**ವಿಷಯ:** ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರ ಮತ್ತು ಕಾರ್ಯಕಾರಿ ಮಂಡಳಿಯ ಚುನಾವಣೆ ನಡೆಸುವ ಬಗ್ಗೆ.

**ಓದಲಾಗಿದೆ:**
1) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅ.ಟಿ. ಸಂಖ್ಯೆ: ಸಂಕಇ 62-ಕರಅ 2004, ದಿನಾಂಕ: 21.6.2004.
2) ಸರ್ಕಾರದ ಆದೇಶ ಸಂಖ್ಯೆ: ಕಂಇ 30 ಮುನೋಸೊ 2004, ದಿನಾಂಕ: 5.7.2004.
3) ಉಪ ವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ ರವರ ಅ.ಸ.ಪತ್ರ ಸಂಖ್ಯೆ: ಚುನಾ:ಕಸಾಪ: ಸಿಆರ್:10:2004-05, ದಿನಾಂಕ: 5.7.2004.
4) ತಿದ್ದುಪಡಿ ಆದೇಶ ಸಂಖ್ಯೆ: ಕಂಇ 30 ಮುನೋಸೊ 2004, ದಿನಾಂಕ: 6.7.2004.
5) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾ (ಸ್ವಸಂಸ್ಥೆ), ಸಿಆರ್ 01:2004-05, ದಿನಾಂಕ: 8.7.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅನಧಿಕೃತ ಟಿಪ್ಪಣಿಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತ ಮಂಡಳಿಯ ಅಧಿಕಾರ ಅವಧಿಯು ದಿನಾಂಕ: 10.7.2004ಕ್ಕೆ ಕೊನೆಗೊಳ್ಳುವುದರಿಂದ, ಪರಿಷತ್ತಿನ ಅಧ್ಯಕ್ಷರ ಹಾಗೂ ಕಾರ್ಯಕಾರಿ ಸಮಿತಿ ಸದಸ್ಯರ ಆಯ್ಕೆಗೆ ಪರಿಷತ್ತಿನ ನಿಬಂಧನೆಗಳ ಪ್ರಕಾರ ಚುನಾವಣಾಧಿಕಾರಿಯನ್ನು ನೇಮಕ ಮಾಡುವಂತೆ ಕೋರಿದ್ದರಿಂದ, ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಉಪ ವಿಭಾಗಾಧಿಕಾರಿ, ಬೆಂಗಳೂರು ದಕ್ಷಿಣ ಉಪ ವಿಭಾಗ, ಬೆಂಗಳೂರು ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ (3) ರಲ್ಲಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪ ವಿಭಾಗ, ಬೆಂಗಳೂರು ಇವರು ಚಾಮರಾಜ ಪೇಟೆಯಲ್ಲಿರುವ ಕನ್ನಡ ಸಾಹಿತ್ಯ ಪರಿಷತ್ತಿನ ವ್ಯಾಪ್ತಿಯು ಬೆಂಗಳೂರು ಉತ್ತರ ವಿಭಾಗಾಧಿಕಾರಿಗಳ ಕಾರ್ಯವ್ಯಾಪ್ತಿಗೆ ಬರುವುದರಿಂದ, ಮೇಲೆ ಓದಲಾದ (2)ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ, ತಿದ್ದುಪಡಿ ಆದೇಶ ಹೊರಡಿಸುವಂತೆ ಕೋರಿದ್ದರಿಂದ ಮೇಲೆ ಓದಲಾದ (2)ರ ಆದೇಶವನ್ನು ಮಾರ್ಪಡಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ, ಬೆಂಗಳೂರು ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ (4)ರ ತಿದ್ದುಪಡಿ ಆದೇಶವನ್ನು ಹೊರಡಿಸಲಾಗಿತ್ತು. ಮೇಲೆ ಓದಲಾದ (5) ರಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರು ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ವಿಭಾಗ, ಇವರಿಗೆ ಹೆಚ್ಚಿನ ಕೆಲಸದ ಒತ್ತಡವಿರುವುದರಿಂದ ಹಾಗೂ ಶ್ರೀ ಕೆ. ನಾಗರಾಜು, ಸಹಾಯಕ ನಿರ್ದೇಶಕರು, ಹಿಂದುಳಿದ ವರ್ಗಗಳ ನಿರ್ದೇಶನಾಲಯ, ಬೆಂಗಳೂರು ರವರಿಗೆ ಚುನಾವಣೆ ನಡೆಸಿ ಅನುಭವವಿರುವುದರಿಂದ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗ ಇವರ ಬದಲಿಗೆ ಸಹಾಯಕ ನಿರ್ದೇಶಕರು, ಹಿಂದುಳಿದ ವರ್ಗಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ನೇಮಿಸುವಂತೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಯವರ ಕೋರಿಕೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.-

**ಸರ್ಕಾರಿ ಆದೇಶ ಸಂಖ್ಯೆ: ಕಂಇ 30 ಮುನೋಸೊ 2004, ಬೆಂಗಳೂರು, ದಿನಾಂಕ: 12ನೇ ಜುಲೈ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಕಾರ್ಯಕಾರಿ ಸಮಿತಿಯ ಸದಸ್ಯರನ್ನು ಚುನಾಯಿಸಲು "ಶ್ರೀ ಕೆ. ನಾಗರಾಜು, ಸಹಾಯಕ ನಿರ್ದೇಶಕರು, ಹಿಂದುಳಿದ ವರ್ಗಗಳ ನಿರ್ದೇಶನಾಲಯ, ಬೆಂಗಳೂರು" ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶ ಸಂಖ್ಯೆ: ಕಂಇ 30 ಮುನೋಸೊ 2004, ದಿನಾಂಕ: 5.7.2004 ಮತ್ತು ಮೇಲೆ ಓದಲಾದ (4)ರ ತಿದ್ದುಪಡಿ ಆದೇಶ ದಿನಾಂಕ: 6.7.2004ನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ನಾರಾಯಣ**
ಪಿ.ಆರ್. 773 ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

**ಆರ್ಥಿಕ ಸಚಿವಾಲಯ**

**ವಿಷಯ:** ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ತುಟ್ಟಿಭತ್ಯೆ ದರಗಳ ಪರಿಷ್ಕರಣೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಆಇ (ವಿಶೇಷ) 5 ಪಿಇಟಿ 2004, ದಿನಾಂಕ: 24.2.2004.

**ಆದೇಶ ಸಂಖ್ಯೆ: ಆಇ (ವಿಶೇಷ) 10 ಪಿಇಟಿ 2004, ಬೆಂಗಳೂರು, ದಿನಾಂಕ: 8ನೇ ಜುಲೈ 2004**

ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 59 ರಷ್ಟಿರುವ ತುಟ್ಟಿಭತ್ಯೆ ದರವನ್ನು ಶೇಕಡ 61ಕ್ಕೆ ದಿನಾಂಕ: 1.1.2004 ರಿಂದ ಜಾರಿಗೆ ಬರುವಂತೆ ಹೆಚ್ಚಿಸಿ ಮಂಜೂರು ಮಾಡಲಾಗಿದೆ.

2. ಈ ಆದೇಶದಿಂದಾಗಿ ಪಾವತಿಸಬೇಕಾದ ತುಟ್ಟಿಭತ್ಯೆಯ ಮೊತ್ತದಲ್ಲಿ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಶಗಳನ್ನು ಕಡೆಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಕೆ. ನಾಯಕ್**
ಪಿ.ಆರ್. 777 ವಿಶೇಷಾಧಿಕಾರಿ (ವಿಶ್ರಾಂತಿ ವೇತನ), ಆರ್ಥಿಕ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ವೈ.ಆರ್. ಸಾವಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರಿಗೆ, ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 71 ಎಸ್ಇಎನ್ 99, ದಿನಾಂಕ: 27.9.2003.
2. ಶ್ರೀ ವೈ.ಆರ್. ಸಾವಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರ ವಿಚಾರಣಾ ವರದಿ ದಿನಾಂಕ: 29.5.2004.

**ಪ್ರಸ್ತಾವನೆ:**

ಶ್ರೀ ಟಿ. ಮಲ್ಲೇಶಪ್ಪ, ನಿರ್ದೇಶಕರು, ಹೊಂಡದಕೇರಿ, ಮುಖ್ಯ ಗ್ರಂಥಾಲಯಾಧಿಕಾರಿಗಳು, ಶ್ರೀ ಕೆ.ಜಿ. ವೆಂಕಟೇಶ್, ಮುಖ್ಯ ಗ್ರಂಥಾಲಯಾಧಿಕಾರಿಗಳು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ರವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 27.9.2003ರ ಸರ್ಕಾರಿ ಆದೇಶದಲ್ಲಿ ಶ್ರೀ ವೈ.ಆರ್. ಸಾವಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ನಿವೃತ್ತ ನ್ಯಾಯಾಧೀಶರು ಮೇಲೆ (2) ರಲ್ಲಿ ಓದಲಾದ ದಿನಾಂಕ: 29.5.2004ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 71 ಎಸ್ಇಎನ್ 99, ಬೆಂಗಳೂರು, ದಿನಾಂಕ: 9ನೇ ಜುಲೈ 2004**

ಸರ್ಕಾರವು ಶ್ರೀ ವೈ.ಆರ್. ಸಾವಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರು ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿದ ವಿಚಾರಣಾ ವರದಿ ಸಲ್ಲಿಸಿದ ಕಾರಣ ಅವರಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.4.1998 ರನ್ವಯ ರೂ.5000-00 (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ ರೂ.1000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನಭತ್ಯೆಯನ್ನು ಪಾವತಿ ಮಾಡಲು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052-ಸಚಿವಾಲಯ ಸಾಮಾನ್ಯ ಸೇವೆಗಳು-090 ಸಚಿವಾಲಯ-01 ಕರ್ನಾಟಕ ಸರ್ಕಾರದ ಸಚಿವಾಲಯ-014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಪಿ.ಆರ್. 778 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ENERGY SECRETARIAT**

**Subject:** Transfer of 2.4 MW Wind Power capacity in favour of M/s. Cooper Foundry Private Limited-orders relating to.

**Read:**
1. Government Order No. DE 98 NCE 2000, dated: 10.7.2000.
2. Government Order No. DE 307 NCE 2003, dated: 1.1.2004.
3. Letter No. KRED/08/CEPL/2004/1292, dated: 15.7.2004 of the Managing Director, KREDL, Bangalore.

**PREAMBLE**:

In the Government Order dated: 10.7.2000 read at (1) above, sanction has been accorded for implementation of 110 MW capacity Wind Power Project at Chitradurga District to M/s Enercon India Limited.

2. In the Government Order dated: 1.1.2004 read at (2) above, 2.4 MW Wind Power Capacity has been transferred in favour of M/s Shraddha Constructions, Pune at Survey No.47 of Ittegehalli village, Jogimatti Wind Zone, Chitradurga District from out of 110 MW Wind Power capacity of M/s. Enercon India Limited.

3. Now, the Managing Director, Karnataka Renewable Energy Development Limited in his letter dated: 15.7.2004 read at (3) above has intimated that M/s Shraddha Constructions have surrendered the 2.4 MW Wind Power Project allotted to it vide Government Order dated: 1.1.2004 to the Principal allottee i.e. M/s. Enercon India Limited. Further, the Managing Director, Karnataka Renewable Energy Development Limited has recommended for cancellation of 2.4 MW Wind Power capacity to M/s. Shraddha Constructions made in Government Order dated: 1.1.2004 and further requested to transfer the said 2.4 MW Wind Power Capacity to M/s Cooper Foundry Private Limited.

4. The proposal has been examined and pass the following order.

**Government Order No: EN 235 NCE 2004, Bangalore, Dated: 17th July 2004.**

5. In the circumstances explained in the preamble, Government are pleased to cancel the transfer of 2.4 MW Wind Power capacity allotted in favour of M/s Shraddha Constructions in Government Order No. DE 307 NCE 2003, dated: 1.1.2004 at Survey No.47, Ittegehalli village, Jogimatti Wind Zone, Chitradurga District with immediate effect and the same is transferred to M/s Enercon India Limited. Further, Government are pleased to transfer the said 2.4 MW Wind Power capacity in Survey No.47 at Ittege halli, Hiriyur Taluk, Chitradurga District to an extent of 5.88 (ha) to M/s. Cooper Foundry Private Limited, Satara, out of above 2.4 MW capacity of M/s Enercon India Limited.

6. The terms and conditions of the original allotment made in the Government Order read at(1) above to M/s Enercon India Limited shall Ipsofacto applicable to M/s Cooper foundry Private Limited, Satara.

By Order and in the Name of the Governor of Karnataka,

**K.L. JAYARAM**

P.R. 770 Under Secretary to Government, Energy Department.

**Subject:** Transfer of 1.2 MW Wind Power capacity in favour of M/s. Laxmi Organic Industries Limited-orders relating to.

**Read:**
1. Government Order No. DE 98 NCE 2000, dated: 10.7.2000.
2. Government Order No. DE 308 NCE 2003, dated: 1.1.2004.
3. Letter No. KRED/08/LOIL/2004/1293, dated: 15.7.2004 of the Managing Director, KREDL, Bangalore.

**PREAMBLE**:

In the Government Order dated: 10.7.2000 read at (1) above, sanction has been accorded for implementation of 110 MW capacity Wind Power Project at Chitradurga District to M/s Enercon India Limited.

2. In the Government Order dated: 1.1.2004 read at (2) above, 6.6 MW Wind Power Capacity has been transferred in favour of M/s Shraddha Constructions, Pune at Survey No.47 & 7 of Ittegehalli village and Haladyamenahalli Village of Jogimatti Wind Zone, Chitradurga District from out of 110 MW Wind Power capacity of M/s. Enercon India Limited.

3. Now, the Managing Director, Karnataka Renewable Energy Development Limited in his letter dated: 15.7.2004 read at (3) above has intimated that M/s Shraddha Constructions have surrendered the 1.8 MW Wind Power Project allotted to it vide Government Order dated: 1.1.2004 to the Principal allottee

i.e. M/s. Enercon India Limited. Further, the Managing Director, Karnataka Renewable Energy Development Limited has recommended to cancellation of 1.8 MW Wind Power capacity to M/s. Shraddha Constructions made in Government Order dated: 1.1.2004 read at (2) above and further requested to transfer the 1.2 MW Wind Power Capacity to M/s Laxmi Organic Industries Limited.

4. The proposal has been examined and pass the following order.

**Government Order No: EN 234 NCE 2004, Bangalore, Dated: 17th July 2004.**

5. In the circumstances explained in the preamble, Government are pleased to cancel the transfer of 1.8 MW Wind Power capacity out of 6.6 MW allotted in favour of M/s Shraddha Constructions in Government Order No. DE 308 NCE 2003, dated: 1.1.2004 at Survey No.47 & 7 of Ittegehalli village and Haladyamenahalli Village, Jogimatti Wind Zone, Chitradurga District with immediate effect and also hereby restore the same i.e. 1.8 WW to M/s Enercon India Limited. Further, Government are pleased to accord sanction for transfer of 1.2. MW Wind Power capacity out of 1.8 MW of M/s Enercon India Limited to M/s Laxmi Organic Industries Limited, Mahad, Raigad District, Maharastra State at Survey No.47 of Ittegehalli, Hiriyur Taluk, Chitradurga District to an extent of 2.94 (ha).

6. The terms and conditions of the original allotment made in the Government Order read at (1) above to M/s Enercon India Limited shall Ipsofacto applicable to M/s Laxmi Organic Industries Limited.

By Order and in the Name of the Governor of Karnataka,

**K.L. JAYARAM**

P.R. 771 Under Secretary to Government, Energy Department.

**INFRASTRUCTURE DEVELOPMENT SECRETARIAT**

**Subject:** Release of funds for Cost Sharing Railway Projects in the State of Karnataka-2004-05.

**Read:**
1. G.O.No. IDD 1 NSW 2002, dated: 22.11.2002.
2. G.O.No. IDD I NSW 2002, dated: 22.03.2002.
3. G.O.No. IDD 1 NSW 2002, dated: 19.02.2003.
4. G.O.No. IDD 47 NSW 2003, dated: 12.09.2003.
5. G.O.No. IDD 4 NSW 2003, dated: 22.1.2004.
6. G.O.No. IDD 47 NSW 2003(P), dated: 26.03.2004.
7. Letter No.W.63/13/CN/BNC/Genl, dated: 07.06.04, from CAO, (Construction) SWR, Bangalore.

**PREAMBLE**:

1. Government of Karnataka has so far released Rs.12 crores towards its share of the investment on cost sharing projects, through various Government Orders at 1 to 6 above.

2. Chief Administrative Officer, (Construction) South Western Railway, in the letter at 7 above has requested for further release of funds for execution of the cost sharing projects. (read at Sl.No.7 above)

3. Government of Karnataka has examined the proposal and decided to release Rs.1 crore (Rupees One crores only) as its share of the above projects. Hence this order.

**Government Order No: IDD 51 NSW 2004, Bangalore, Dated: 19th July 2004.**

1. In the circumstances explained in the Preamble, Government of Karnataka are pleased to release an amount of Rs.1.00 crore (Rupees one crore only) to the Ministry of Railways, Government of India, towards its share of expenditure for the Kottur-Harihar (New Line), Bangalore-Kengeri (Doubling) and Kengeri-Ramanagaram (Doubling) rail projects.

2. The expenditure shall be met out of the Budget Provision under the head of account "5465-01-190-3-05-211-Cost Sharing for New Projects-Investments (Plan)".

3. The Managing Director, iDeCK is authorized to draw the amount on Payee's Receipt duly countersigned by the Under Secretary to Govt., Infrastructure Development Department and in turn issue a cheque for the amount drawn in favour of Financial Advisor & Chief Accounts Officer (Construction), South Western Railway, Bangalore.

4. This order issues with the concurrence of the Finance Department, vide its U.O.Note No. FD 485/Exp.1/2004, dated: 03.07.2004.

By Order and in the Name of the Governor of Karnataka,

**T.B. RENUKAPRASAD**

P.R. 772 Under Secretary to Government,
Infrastructure Development Department.

## ಆರ್ಥಿಕ ಸಚಿವಾಲಯ

**ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 12 ಎಸ್‌ಆರ್‌ಎಸ್ 2004. ಬೆಂಗಳೂರು, ದಿನಾಂಕ: 7ನೇ ಜುಲೈ 2004.**

**ವಿಷಯ:** ಸರ್ಕಾರಿ ನೌಕರರ ದೈಹಿಕ/ಮಾನಸಿಕ, ಅಂಗವಿಕಲ ಮಕ್ಕಳಿಗೆ ಕುಟುಂಬ ವೇತನವನ್ನು ಮಂಜೂರು ಮಾಡಲು ಅನುಕೂಲವಾಗುವಂತೆ ಸೂಕ್ತ ದಾಖಲೆಗಳನ್ನು ಸಲ್ಲಿಸುವ ಬಗ್ಗೆ.

**ಉಲ್ಲೇಖ:** 1. ದಿನಾಂಕ 11.3.2004ರ ಆಇ 7 ಸನಿತಿ 2003ನೇ ಕ್ರಮಾಂಕದ ಅಧಿಸೂಚನೆ.

2. ದಿನಾಂಕ 26.4.2004ರ ಆಇ 8 ಸನಿತಿ 2003ನೇ ಕ್ರಮಾಂಕದ ಅಧಿಸೂಚನೆ.

ಕರ್ನಾಟಕ ಸರ್ಕಾರಿ ನೌಕರರ(ಕುಟುಂಬ ನಿವೃತ್ತಿ ವೇತನ) ನಿಯಮಗಳು 2002ರನ್ವಯ ಸರ್ಕಾರಿ ನೌಕರರ ಪ್ರಾಪ್ತ ವಯಸ್ಕ ಮಗ ಅಥವಾ ಮಗಳು ಯಾವುದೇ ಮಾನಸಿಕ ಅಸ್ವಸ್ಥತೆ ಅಥವಾ ಮನೋವೈಕಲ್ಯ ಅಥವಾ ದೈಹಿಕ ಅಂಗವಿಕಲತೆಯಿಂದ ಜೀವನ ನಿರ್ವಹಣೆ ಗಳಿಸಲು ಅಸಮರ್ಥವಾದಲ್ಲಿ ಕೆಲವು ಷರತ್ತುಗಳಿಗೊಳಪಟ್ಟು ಕುಟುಂಬ ವೇತನವನ್ನು ಅವರ ಜೀವಿತ ಅವಧಿಯವರೆಗೆ ಸಂದಾಯ ಮಾಡಲು ಅವಕಾಶವಿದೆ. ಪಿಂಚಣಿದಾರ ಮತ್ತು ನಿಯಮಾನುಸಾರ ಕುಟುಂಬ ವೇತನ ಪಡೆಯಲು ಅರ್ಹರಾದ ವ್ಯಕ್ತಿ ಮರಣಹೊಂದಿದ ನಂತರ ಇಂತಹ ಮಕ್ಕಳಿದ್ದಲ್ಲಿ, ಪೋಷಕರ ಮೂಲಕ ಸೂಕ್ತ ದಾಖಲೆಗಳೊಂದಿಗೆ ಕುಟುಂಬ ವೇತನ ಪಡೆಯಲು ಅರ್ಜಿ ಸಲ್ಲಿಸಬೇಕಾಗುತ್ತದೆ.

ಮಾನಸಿಕ ಅಸ್ವಸ್ಥತೆ ಅಥವಾ ಮನೋವೈಕಲ್ಯ ಅಥವಾ ದೈಹಿಕ ಅಂಗವಿಕಲತೆಯಿಂದ ಜೀವನ ನಿರ್ವಹಣೆ ಗಳಿಸಲು ಅಸಮರ್ಥರಾಗಿರುವ ಪ್ರಾಪ್ತ ವಯಸ್ಕ ಮಗ ಅಥವಾ ಮಗಳು ಪಿಂಚಣಿದಾರನ ಅಥವಾ ನಿವೃತ್ತಿ ವೇತನಕ್ಕೆ ಅರ್ಹನಾದ ವ್ಯಕ್ತಿಯ ಮರಣದ ನಂತರ ಕುಟುಂಬ ವೇತನ ಪಡೆಯಲು ಕಷ್ಟವಾಗಿರುವುದರಿಂದ ಇಂತಹ ಮಕ್ಕಳಿಗೆ ನಿಯಮಾನುಸಾರ ಕುಟುಂಬ ನಿವೃತ್ತಿ ವೇತನ ಪಡೆಯಲು ಅನುಕೂಲವಾಗುವಂತೆ ಅವರ ಹೆಸರುಗಳನ್ನು ಕುಟುಂಬ ನಿವೃತ್ತಿ ವೇತನಕ್ಕೆ ಸಂಬಂಧಪಟ್ಟ ಕಡತದಲ್ಲಿ ಮುಂಚಿತವಾಗಿ ದಾಖಲೆ ಮಾಡಿಕೊಳ್ಳಲು ಅವಕಾಶ ಕಲ್ಪಿಸುವ ಅಗತ್ಯತೆಯ ಬಗ್ಗೆ ಪರಿಶೀಲಿಸಿ, ಈ ಬಗ್ಗೆ ಮಹಾಲೇಖಪಾಲರೊಡನೆ ಸಮಾಲೋಚಿಸಲಾಗಿದೆ. ಕೇಂದ್ರಸರ್ಕಾರವು ಪೆನ್ಷನ್ ಪೇಮೆಂಟ್ ಆರ್ಡರ್‌ನಲ್ಲಿ ಮತ್ತು ನಿಯಮಗಳಲ್ಲಿ ಈ ಸಂಬಂಧ ಮಾಡಿರುವ ಅವಕಾಶಗಳ ಹಿನ್ನೆಲೆಯಲ್ಲಿ ರಾಜ್ಯಸರ್ಕಾರವು ಸಹ ಕುಟುಂಬ ನಿವೃತ್ತಿ ವೇತನ ನಿಯಮಗಳಿಗೆ ಸೂಕ್ತ ತಿದ್ದುಪಡಿ ತರಬಹುದೆಂದು ಮಹಾಲೇಖಪಾಲರು ಅಭಿಪ್ರಾಯ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಮೂನೆ 1–ಬಿ ಗೆ ಹಾಗೂ ಕುಟುಂಬ ನಿವೃತ್ತಿ ವೇತನ ನಿಯಮಗಳು 2002ರ ನಮೂನೆ–ಎಗೆ ಸೂಕ್ತ ತಿದ್ದುಪಡಿಗಳನ್ನು ಕ್ರಮವಾಗಿ ಉಲ್ಲೇಖ 1 ಮತ್ತು 2ರ ಅಧಿಸೂಚನೆಗಳಲ್ಲಿ ತರಲಾಗಿದೆ. ಸರ್ಕಾರಿ ನೌಕರರು ನಿವೃತ್ತಿ ವೇತನ ಮಂಜೂರಾತಿ ಕೋರಿ ಸಲ್ಲಿಸಿರುವ ಅರ್ಜಿಗಳಲ್ಲಿ ಮಾನಸಿಕ ಅಸ್ವಸ್ಥತೆ ಅಥವಾ ಮನೋವೈಕಲ್ಯ ಅಥವಾ ದೈಹಿಕ ಅಂಗವಿಕಲತೆಯಿಂದ ಬಳಲುತ್ತಿರುವ ಮಕ್ಕಳ ಬಗ್ಗೆ ವೈದ್ಯಕೀಯ ಪ್ರಮಾಣಪತ್ರದೊಂದಿಗೆ ಮಾಹಿತಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ. ಈ ಅವಕಾಶದಿಂದ ಮುಂದೆ ನಿವೃತ್ತಿ ವೇತನ ಮಂಜೂರಾಗುವ ಪ್ರಕರಣಗಳಲ್ಲಿ ಮಾನಸಿಕ ಅಸ್ವಸ್ಥತೆ ಅಥವಾ ಮನೋವೈಕಲ್ಯ ಅಥವಾ ದೈಹಿಕ ಅಂಗವಿಕಲತೆಯಿಂದ ಜೀವನ ನಿರ್ವಹಣೆ ಗಳಿಸಲು ಅಸಮರ್ಥರಾಗಿರುವ ಪ್ರಾಪ್ತ ವಯಸ್ಕ ಮಕ್ಕಳಿಗೆ, ನಿವೃತ್ತ ಸರ್ಕಾರಿ ನೌಕರರ ಅಥವಾ ನಿಯಮಾನುಸಾರ ಪಿಂಚಣಿ ಪಡೆಯಲು ಅರ್ಹರಾದ ವ್ಯಕ್ತಿಯ ಮರಣದ ನಂತರ, ಕುಟುಂಬ ನಿವೃತ್ತಿ ವೇತನ ಮಂಜೂರು ಮಾಡಲು ಅನುಕೂಲವಾಗುವುದು.

ಆದರೆ ಈ ತಿದ್ದುಪಡಿ ನಿಯಮಗಳು ಜಾರಿಗೆ ಬರುವ ಪೂರ್ವದಲ್ಲಿ ಮಂಜೂರಾಗಿರುವ ನಿವೃತ್ತಿ ವೇತನ ಪ್ರಕರಣಗಳಲ್ಲಿ ಇಂತಹ ಮಕ್ಕಳ ಬಗ್ಗೆ ಯಾವುದೇ ದಾಖಲೆಗಳು ಇರುವುದಿಲ್ಲವಾದ್ದರಿಂದ, ಪ್ರಸಂಗ ಒದಗಿದಲ್ಲಿ ಇಂತಹ ಮಕ್ಕಳಿಗೆ ನಿಯಮಾನುಸಾರ ಕುಟುಂಬ ನಿವೃತ್ತಿ ವೇತನ ಮಂಜೂರು ಮಾಡಲು ಅನುಕೂಲವಾಗುವಂತೆ ಇಂತಹದೇ ವಿಧಿವಿಧಾನವನ್ನು ಅನುಸರಿಸಲು ಸರ್ಕಾರವು ಉದ್ದೇಶಿಸಿದೆ. ಆದುದರಿಂದ ಪಿಂಚಣಿದಾರರು ಇಚ್ಛೆಪಟ್ಟಲ್ಲಿ ಮಾನಸಿಕ ಅಸ್ವಸ್ಥತೆ ಅಥವಾ ಮನೋವೈಕಲ್ಯ ಅಥವಾ ದೈಹಿಕ ಅಂಗವಿಕಲತೆಯಿಂದ ಬಳಲುತ್ತಿರುವ ಪ್ರಾಪ್ತ ವಯಸ್ಕ ಮಕ್ಕಳು ಇದ್ದಲ್ಲಿ ಅವರ ಬಗ್ಗೆ ವಿವರಗಳನ್ನು ನಿವೃತ್ತಿ ವೇತನ ಮಂಜೂರು ಮಾಡುವ ಪ್ರಾಧಿಕಾರಿಗೆ / ಇಲಾಖಾ ಮುಖ್ಯಸ್ಥರಿಗೆ ಕುಟುಂಬ ನಿವೃತ್ತಿ ವೇತನ ನಿಯಮ 2002ರ ನಮೂನೆ–ಇ ರಲ್ಲಿ ನಿಗಧಿಪಡಿಸಿದ ವೈದ್ಯಕೀಯ ಪ್ರಮಾಣಪತ್ರದೊಂದಿಗೆ ಸಲ್ಲಿಸಬಹುದು. ಅದರಂತೆ ಪಿಂಚಣಿದಾರರು ವಿವರಗಳನ್ನು ಸಲ್ಲಿಸಿದಲ್ಲಿ, ನಿವೃತ್ತಿ ವೇತನ ಮಂಜೂರು ಮಾಡುವ ಪ್ರಾಧಿಕಾರವು / ಇಲಾಖಾ ಮುಖ್ಯಸ್ಥರು ಸ್ವೀಕರಿಸಿ, ಅದನ್ನು ದಾಖಲೆಗೆ ತೆಗೆದುಕೊಂಡು, ಪ್ರಸಂಗ ಒದಗಿದಾಗ ನಿಯಮಾನುಸಾರ ಅಂತಹ ಪ್ರಾಪ್ತ ವಯಸ್ಕ ಮಕ್ಕಳಿಗೆ ಕುಟುಂಬ ನಿವೃತ್ತಿ ವೇತನವನ್ನು ಕೂಡಲೆ ಮಂಜೂರು ಮಾಡಲು ಅಗತ್ಯ ಕ್ರಮ ಜರುಗಿಸುವುದು.

**ಕೆ.ಎಸ್. ಗೋಪಾಲಕೃಷ್ಣ**

ಪಿ.ಆರ್. 784 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು–1).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

ಅಧಿಸೂಚನೆ ಸಂಖ್ಯೆ: ಆಕುಕ 113 ಹೆಚ್‌ಎಸ್‌ಡಿ 2003, ಬೆಂಗಳೂರು, ದಿನಾಂಕ: 20ನೇ ಜುಲೈ 2004

ವಿಶೇಷ ಆಯ್ಕೆ ಸಮಿತಿಯು ದಿನಾಂಕ: 09-12-2003 ರಂದು ಹೊರಡಿಸಿದ ಅಧಿಸೂಚನೆ ಸಂಖ್ಯೆ: ಡಿಆರ್‌ಸಿ/42 (1) /98-99 ರ ಪಟ್ಟಿಯಲ್ಲಿ ಗ್ರಾಮೀಣ ಕೃಪಾಂಕ ರಹಿತ ಆಯ್ಕೆಯಾದ ಪದವೀಧರ ದಂತ ವೈದ್ಯರನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ದಂತ ಆರೋಗ್ಯಾಧಿಕಾರಿಯಾಗಿ ರೂ.7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಖಾಯಂ ಪೂರ್ವ ಸೇವಾವಧಿಯ ಮೇರೆಗೆ ಹಂಗಾಮಿಯಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಈ ಅಧಿಸೂಚನೆಗೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿರುವಂತೆ ನೇಮಿಸಲಾಗಿದೆ.

1. ಈ ಉದ್ಯೋಗ ನೀಡಿಕೆಯು ಅಭ್ಯರ್ಥಿಯ ಪೂರ್ವಾಪರ ನಡವಳಿಕೆ ಬಗ್ಗೆ ಪೊಲೀಸು ವರದಿ ತನಿಖೆಗೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಯು ಎರಡು ವರ್ಷಗಳ ಕಾಲ ಖಾಯಂ ಪೂರ್ವ ಸೇವಾವಧಿಯಲ್ಲಿ ಹುದ್ದೆಗೆ ನಿಗದಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

3. ಈ ಅಧಿಸೂಚನೆ ತಲುಪಿದ ತಕ್ಷಣ ಅಥವಾ ಈ ಅಧಿಸೂಚನೆಯನ್ನು ನೊಂದಣಿ ಅಂಚೆಯಲ್ಲಿ ಕಳುಹಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 18 (3) ರನ್ವಯ ಯಾವುದೇ ಸೂಚನೆ ಇಲ್ಲದೆ ರದ್ದಾಗುವುದು.

4. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಅಧಿಕಾರಿ ః ಜಿಲ್ಲಾ ಶಸ್ತ್ರ ಚಿಕಿತ್ಸಕರು ః ಶಸ್ತ್ರ ಚಿಕಿತ್ಸಕರ ಮುಂದೆ ಹಾಜರುಪಡಿಸಿ, ಅವರಿಂದ ಚಲನಾದೇಶವನ್ನು ಪಡೆದು ನೇಮಿಸಿರುವ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು.

5. ಅಭ್ಯರ್ಥಿಯು ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ನಡವಳಿಕೆ ಪ್ರಮಾಣ ಪತ್ರವನ್ನು ಪಡೆದು ಕೆಲಸಕ್ಕೆ ಹಾಜರಾಗುವ ಸಮಯದಲ್ಲಿ ಹಾಜರು ಪಡಿಸಬೇಕು.

6. ಸ್ನಾತಕೋತ್ತರ ವ್ಯಾಸಂಗ ಮಾಡುತ್ತಿರುವ ಅಭ್ಯರ್ಥಿಗಳಿಗೆ ಸ್ನಾತಕೋತ್ತರ ವ್ಯಾಸಂಗವನ್ನು ಮುಂದುವರಿಸಲು ಅವಕಾಶವಿರುವುದಿಲ್ಲ.

ಅಭ್ಯರ್ಥಿಯ ಜೇಷ್ಠತೆಯು ವಿಶೇಷ ಆಯ್ಕೆ ಸಮಿತಿಯು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದಂತೆ ಇರುತ್ತದೆ.

ನೇಮಕಾತಿ ಮಾಡಿರುವ ಸ್ಥಳದ ಮಾರ್ಪಾಡಿಗಾಗಿ ಅಥವಾ ರದ್ದತಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.

ಸಂಬಂಧಪಟ್ಟ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ః ಜಿಲ್ಲಾ ಶಸ್ತ್ರ ಚಿಕಿತ್ಸಕ ః ಶಸ್ತ್ರ ಚಿಕಿತ್ಸಕರು ಈಗ ನೇಮಕಾತಿ ಹೊಂದಿರುವ ವೈದ್ಯಾಧಿಕಾರಿಗಳ ಜನ್ಮ ದಿನಾಂಕಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ, ದೃಢೀಕೃತ ದಾಖಲಾತಿಗಳನ್ನು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಒಂದು ವಾರದೊಳಗಾಗಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಕಾಶೀನಾಥ ಪಟವಾಡಿ

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಸರ್ಕಾರಿ ಅಧಿಸೂಚನೆ ಸಂಖ್ಯೆః ಆಕುಕ 113 ಹೆಚ್‌ಎಸ್‌ಡಿ 2003 ದಿನಾಂಕః 20-07-2004 ಕ್ಕೆ ಅನುಬಂಧ

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ಮೀಸಲಾತಿ ಪ್ರವರ್ಗ | ನೇಮಕಾತಿ ನೀಡಲು ಸೂಚಿಸಿರುವ ಸ್ಥಳ |
|---|---|---|---|---|
| 1 | 2 | 3 | 4 | 5 |
| 1 | ಡಾః ಸುಫಲ ಕಾಮತ್<br>ತಂದೆః ಕೆ.ಸರ್ವೋತ್ತಮ ಕಾಮತ್<br>ಜೆ.ಪಿ.ನಗರ ಒಂದನೇ ಹಂತ, ಬೆಂಗಳೂರು-78. | 11-11-1974 | ಜಿಎಂ | ಸಾರ್ವಜನಿಕ ಆಸ್ಪತ್ರೆ,<br>ಖಾನಾಪುರ,<br>ಬೆಳಗಾಂ ಜಿಲ್ಲೆ |
| 2 | ಡಾః ಕೋಕಿಲಾ ಜಿ.<br>ತಂದೆః ಡಾః ಕೆ.ಎಸ್.ಗಂಗಣ್ಣ, ಶ್ರೀ ಸಿದ್ದರಾಮೇಶ್ವರ ನಿಲಯ<br>ಶ್ರೀನಿವಾಸ ನರ್ಸಿಂಗ್ ಹೋಂ ಹತ್ತಿರ ಕುವೆಂಪುನಗರ ಅಂಚೆ,<br>ತುಮಕೂರು ಜಿಲ್ಲೆ-572103 | 04-03-1974 | ಜಿಎಂ | ಸಾರ್ವಜನಿಕ ಆಸ್ಪತ್ರೆ<br>ಬೀರೂರು<br>ಚಿಕ್ಕಮಗಳೂರು ಜಿಲ್ಲೆ |
| 3 | ಡಾః ಮಲ್ಲಿಕಾರ್ಜುನ ಎಸ್. ಕುಂಬಾರ್<br>ಕೇರಾಫ್ః ಎಸ್.ಎಸ್.ವನ್ನಾಳ್, ಮಂಜುನಾಥ ನಗರ, ಕಣವಿ<br>ಫ್ಲಾಟ್, ಬೆಟಗೇರಿ, ಗದಗ ಜಿಲ್ಲೆ | 15-07-1975 | III- ಬಿ | ಸಾರ್ವಜನಿಕ ಆಸ್ಪತ್ರೆ<br>ಗೋಕಾಕ್,<br>ಬೆಳಗಾಂ ಜಿಲ್ಲೆ |
| 4 | ಡಾః ರವಿ ಎಸ್.<br>ತಂದೆః ಶಾಂತರಾಜ್ ಎಸ್.ಎಂ. ಶಿರಸ್ತೇದಾರ್, ತಾಲ್ಲೂಕು<br>ಕಚೇರಿ, ಪಿಡಬ್ಲ್ಯುಡಿ ವಸತಿಗೃಹ, ಕಡೂರು,<br>ಚಿಕ್ಕಮಗಳೂರು ಜಿಲ್ಲೆ-577548 | 22-05-1975 | II -ಎ | ಸಾರ್ವಜನಿಕ ಆಸ್ಪತ್ರೆ<br>ಅಥಣಿ<br>ಬೆಳಗಾಂ ಜಿಲ್ಲೆ |
| 5 | ಡಾః ಭಾರತಿ ಎಂ.<br>ನಂః 33, 2 ನೇ ಅಡ್ಡರಸ್ತೆ, ಎ.ಎನ್.ಗುಪ್ತ ಲೇಔಟ್,<br>ಬೆಂಗಳೂರು-560030 | 31-07-1974 | III -ಎ | ಸಾರ್ವಜನಿಕ ಆಸ್ಪತ್ರೆ<br>ಪಾಂಡವಪುರ<br>ಮಂಡ್ಯ ಜಿಲ್ಲೆ |
| 6 | ಡಾః ಶೌಕತ್ತುನ್ನೀಸಾ ಶಮಾ ಎನ್.<br>ತಂದೆః ನೂರ್ ಅಹ್ಮದ್, ನಂః1599, 7ನೇ ಅಡ್ಡರಸ್ತೆ<br>I ನೇ ಹಂತ, ಕುಮಾರಸ್ವಾಮಿ ಲೇಔಟ್,<br>ಬೆಂಗಳೂರು-560078 | 07-11-1974 | II -ಬಿ | ಎಸ್.ಎನ್.ಆರ್<br>ಜಿಲ್ಲಾ ಆಸ್ಪತ್ರೆ<br>ಕೋಲಾರ |
| 7 | ಡಾః ಸೀಮಾ ಎಂ.<br>ನಂః 44 ವಿಸ್ಮಯ, 1ನೇ ಮುಖ್ಯ 1ನೇ ಅಡ್ಡರಸ್ತೆ<br>ಸಪ್ತಗಿರಿ ಲೇಔಟ್, ನಗರಬಾವಿ 2ನೇ ಹಂತ,<br>ಬೆಂಗಳೂರು-72. | 06-04-1975 | III -ಬಿ | ಸಾರ್ವಜನಿಕ ಆಸ್ಪತ್ರೆ<br>ಹೊಸಪೇಟೆ<br>ಬಳ್ಳಾರಿ ಜಿಲ್ಲೆ |

| 1 | 2 | 3 | 4 | 5 |
|---|---|---|---|---|
| 8 | ಡಾ॥ ಶೀತಲ್ ಬಿ.ಎಸ್.<br>ತಂದೆ॥ ಸೂರ್ಯನಾರಾಯಣ ರಾವ್ ಬಿ.ಎನ್. ನಂ॥ 262, ಗಾಯತ್ರಿಪುರಂ, 2 ನೇ ಹಂತ, ಉದಯಗಿರಿ ಅಂಚೆ ಮೈಸೂರು-570019 | 20-12-1975 | II -ಎ | ಸಾರ್ವಜನಿಕ ಆಸ್ಪತ್ರೆ ಗೋಣಿಕೊಪ್ಪ ಕೊಡಗು ಜಿಲ್ಲೆ |
| 9 | ಡಾ॥ ಮೀರಾ ಪಿ.<br>ತಂದೆ॥ ಪಾಪಯ್ಯ ಹೆಚ್. ನಂ॥ 1, ಎ -ಬ್ಲಾಕ್, ಕಾರ್ಪೋರೇಷನ್ ವಸತಿಗೃಹ ಮಿಷನ್‌ರೋಡ್, ಬೆಂಗಳೂರು-27 | 20-01-1974 | ಎಸ್‌ಸಿ | ಸಮುದಾಯ ಆರೋಗ್ಯ ಕೇಂದ್ರ, ಸಾಲಿಗ್ರಾಮ, ಮೈಸೂರು ಜಿಲ್ಲೆ |
| 10 | ಡಾ॥ ಪ್ರಿಯದರ್ಶಿನಿ ಸಿ.<br>ಗಂಡ॥ ಪ್ರಮೋದ್ ಎಂ. ಗವಾರಿ ಬಿ-14, ಆಫೀಸರ್ಸ್ ಕ್ವಾರ್ಟರ್ಸ್ ಬಿಇಎಂಎಲ್ ಟೌನ್‌ಶಿಪ್, ತಿಪ್ಪಸಂದ್ರ, ಬೆಂಗಳೂರು-75 | 05-04-1974 | ಎಸ್‌ಸಿ | ಸಾರ್ವಜನಿಕ ಆಸ್ಪತ್ರೆ ಕುಂದಗೋಳ ಧಾರವಾಡ ಜಿಲ್ಲೆ |
| 11 | ಡಾ॥ ಸುಕನ್ಯ ಎಂ.<br>ನಂ॥ 79, 16 ನೇ ಅಡ್ಡರಸ್ತೆ, ಮುದ್ದಪ್ಪ ರಸ್ತೆ , ಎಂ.ಎಸ್.ನಗರ ಅಂಚೆ, ಬೆಂಗಳೂರು-33 | 02-01-1972 | ಎಸ್‌ಸಿ | ಸಾರ್ವಜನಿಕ ಆಸ್ಪತ್ರೆ ಸೋಮವಾರಪೇಟೆ, ಕೊಡಗು ಜಿಲ್ಲೆ. |

ಕಾಶೀನಾಥ ಪಟವಾಡಿ

ಪಿ.ಆರ್. 785 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಕೃಷಿಕರಿಗೆ ಮತ್ತು ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಆಯ್ಕೆ ಸಮಿತಿಯ ಪುನರ್ ರಚನೆ ಬಗ್ಗೆ.

**ಓದಲಾಗಿದೆ:** 1. ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ ಇವರ ಪತ್ರ ಸಂಖ್ಯೆ: ಆರ್/ಅಧೀಕ್ಷಕರು-3/ಯುಜಿ:ಸಿಬ್ಬಂದಿ.ಪಿಟಿ: 2004-05, ದಿನಾಂಕ: 23.6.2004.

2. ಧಾರವಾಡ ಕೃಷಿ ವಿಶ್ವವಿದ್ಯಾನಿಲಯ ಇವರ ಪತ್ರ ಸಂಖ್ಯೆ: ಕುಸ:ಪ್ರವೇಶ:ಎ-3:410-ಸಿ:2004, ದಿನಾಂಕ: 28.6.2004.

**ಪ್ರಸ್ತಾವನೆ:**

ಬೆಂಗಳೂರು:ಧಾರವಾಡ ಕೃಷಿ ವಿಶ್ವವಿದ್ಯಾನಿಲಯ ಕುಲಸಚಿವರು ಇವರ ಪತ್ರ ದಿನಾಂಕ: 23.6.2004 ಮತ್ತು 28.6.2004ರ ಪತ್ರದಲ್ಲಿ 2004-05ನೇ ಸಾಲಿನಲ್ಲಿ ಕೃಷಿಕರ ಹಾಗೂ ಕೃಷಿಕರ ಮಕ್ಕಳಿಗೆ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು, ಆಯ್ಕೆ ಸಮಿತಿಯನ್ನು ರಚಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 129 ಕೃವಿವಿ 2004, ಬೆಂಗಳೂರು, ದಿನಾಂಕ: 23ನೇ ಜುಲೈ 2004**

ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಮತ್ತು ಧಾರವಾಡ ಇಲ್ಲಿ ಕೃಷಿಕರಿಗೆ ಹಾಗೂ ಕೃಷಿಕರ ಮಕ್ಕಳಿಗೆ ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಪ್ರವೇಶದಲ್ಲಿ ಮೀಸಲಿಟ್ಟಿರುವ ಸ್ಥಾನಗಳಿಗೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದಕ್ಕೆ ಈ ಕೆಳಕಂಡಂತೆ ಆಯ್ಕೆ ಸಮಿತಿಗಳನ್ನು 2004-05ನೇ ಸಾಲಿನಿಂದ ಮುಂದಿನ ಆದೇಶದವರೆಗೆ ರಚಿಸಲಾಗಿದೆ.

**ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ:-**

1) ಶಿಕ್ಷಣ ನಿರ್ದೇಶಕರು (ಡೈರಿ ಸೈನ್ಸ್), ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು.
2) ಜಂಟಿ ಕೃಷಿ ನಿರ್ದೇಶಕರು (ವಿಸ್ತರಣೆ ಮತ್ತು ತರಬೇತಿ), ಕೃಷಿ ಇಲಾಖೆ, ಬೆಂಗಳೂರು.
3) ಜಂಟಿ ನಿರ್ದೇಶಕರು (ಜಾನುವಾರು ಮತ್ತು ಅಭಿವೃದ್ಧಿ)
ಪಶುಸಂಗೋಪನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು.

**ಧಾರವಾಡ ಕೃಷಿ ವಿಶ್ವವಿದ್ಯಾನಿಲಯ:**

1) ಶಿಕ್ಷಣ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ.
2) ಜಂಟಿ ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಧಾರವಾಡ.
3) ಜಂಟಿ ನಿರ್ದೇಶಕರು (ಅಭಿವೃದ್ಧಿ) ಪಶುಸಂಗೋಪನೆ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 783 ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರ ಆದೇಶ ಸಂಖ್ಯೆ: ಡಿಪಿಎಆರ್ 324 ಎಸ್‌ಎಎಸ್ 2002 (1) ದಿನಾಂಕ: 3.8.2002.

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಸಸಿವಿ 2003, ದಿನಾಂಕ: 21.7.2003.

3. ಮಹಾಲೇಖಪಾಲರು (ಲೆಕ್ಕಪತ್ರ) ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಎಂ:ಐಎಎಸ್-1:2004-05:483, ದಿನಾಂಕ: 12.5.2004.
4. ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಗ್ರಾಅಪ 24 ಕಾ 2003, ದಿನಾಂಕ: 16.6.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 3.8.2002ರ ಸರ್ಕಾರದ ಆದೇಶದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ನಿಮ್ನೀಕರಿಸಿ ಕಾರ್ಯದರ್ಶಿ (ಪಂಚಾಯತ್‌ರಾಜ್) ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದ್ದು, ನಂತರ ಈ ಹುದ್ದೆಯನ್ನು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 21.7.2003ರ ಸರ್ಕಾರದ ಆದೇಶದಲ್ಲಿ ದಿನಾಂಕ: 8.7.2003 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿರುತ್ತದೆ. ಪ್ರಸ್ತುತ ಈ ವಿಸ್ತರಿತ ಅವಧಿಯು ದಿನಾಂಕ: 7.7.2004ಕ್ಕೆ ಮುಕ್ತಾಯಗೊಳ್ಳಲಿದೆ.

ಮಹಾಲೇಖಪಾಲರು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 12.5.2004ರ ಪತ್ರದಲ್ಲಿ ಸದರಿ ಹುದ್ದೆಯನ್ನು ಮುಂದುವರೆಸಿರುವ ಬಗ್ಗೆ ಹೊರಡಿಸಲಾದ ಆದೇಶದ ಪ್ರತಿಯನ್ನು ಕಳುಹಿಸಿ ಕೊಡುವಂತೆ ಕೋರಿರುತ್ತಾರೆ. ಹಾಗೂ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕಾರ್ಯದರ್ಶಿ (ಪಂಚಾಯತ್ ರಾಜ್) ಇವರು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 16.6.2004ರ ಟಿಪ್ಪಣಿಯಲ್ಲಿ ಹುದ್ದೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 43 ಸಸಿವಿ 2004, ಬೆಂಗಳೂರು, ದಿನಾಂಕ: 8ನೇ ಜುಲೈ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪಂಚಾಯತ್ ರಾಜ್) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 8.7.2004 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

1. ಶೀಘ್ರಲಿಪಿಗಾರ ... 1 ಹುದ್ದೆ
2. ಕಿರಿಯ ಸಹಾಯಕ ... 1 ಹುದ್ದೆ
3. ವಾಹನ ಚಾಲಕ ... 1 ಹುದ್ದೆ
4. ದಲಾಯತ್ ... 2 ಹುದ್ದೆಗಳು

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 779

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## LAW SECRETARIAT

**Subject:** Authorisation of Sri K.B. Kulkarni, Public Prosecutor of IX. Addl. City Civil of Sessions Court, Bangalore to appear and conduct the case in S.C.No.725/99 in the designated court in addition to his regular duties.

**Read:** Letter No. DPN.ADM.27/03-04, dated: 31.5.2004 from the Director of Prosecutions, Bangalore.

**PREAMBLE**:

The Director of Prosecution, Bangalore vide his letter referred to at (1) above has requested to authorised Sri K.B. Kulkarni, Public Prosecutor of the IX. Addl. City Civil of Sessions Court, Bangalore to appear and conduct the case on behalf of the Government in S.C.No.725/99 in the designated court. After careful consideration the Government is pleased to issue the following order.

**Government Order No: LAW 4360 LCM 2002, Bangalore, Dated: 17th July 2004.**

Sri K.B. Kulkarni, Public Prosecutor of IX. Addl. City Civil and Sessions Court, Bangalore is authorised to appear and conduct the case on behalf of the prosecution in S.C.No.725/99 in the designated court in addition to his regular duties.

By Order and in the Name of the Governor of Karnataka,

**M. SHOBHA**

P.R. 781

Asst. Solicitor and Ex-officio

Under Secretary to Government, Law Department (Lit-I).

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಭದ್ರಾ ಯೋಜನಾ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಕರ್ನಾಟಕ ನೀರಾವರಿ ನಿಗಮ ನಿಯಮಿತ, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ರವರ ಪತ್ರ ಸಂಖ್ಯೆ: ಮುಇಂ/ಕನೀನಿನಿ/ತುಂಮೇಯೋವ/ಟಿಎ-2/ಪಿಬಿ-12/2004-05/748 ದಿನಾಂಕ: 30.6.2004

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 30.06.2004 ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಕರ್ನಾಟಕ ನೀರಾವರಿ ನಿಗಮ ನಿಯಮಿತ, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ರವರು ಭದ್ರಾ ಯೋಜನಾ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 123 ಎಂಎಂಬಿ 2004, ಬೆಂಗಳೂರು, ದಿನಾಂಕ: 22ನೇ ಜುಲೈ 2004**

ಭದ್ರಾ ಯೋಜನೆಗೆ ಈ ಕೆಳಕಂಡ ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ಅಧಿಕಾರಿ ಆಹ್ವಾನಿತರು ಹಾಗೂ ಅಧಿಕಾರೇತರ ಆಹ್ವಾನಿತರನ್ನು ಒಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶ ಹೊರಡಿಸುವವರೆಗೆ ಪುನರ್ ರಚಿಸಲಾಗಿದೆ.

| | | |
|---|---|---|
| **ಅಧ್ಯಕ್ಷರು, ಭದ್ರಾ ಕಾಡಾ, ಮಲವಗೊಪ್ಪ, ಶಿವಮೊಗ್ಗ** | | ಅಧ್ಯಕ್ಷರು |
| | **ಅಧಿಕಾರಿ ಸದಸ್ಯರು:-** | |
| 1) | ಆಡಳಿತಾಧಿಕಾರಿಗಳು, ಭದ್ರಾ ಕಾಡಾ, ಶಿವಮೊಗ್ಗ | ಸದಸ್ಯರು |
| 2) | ಮುಖ್ಯ ಇಂಜಿನಿಯರ್, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ | ಸದಸ್ಯರು |
| 3) | ಅಧೀಕ್ಷಕ ಅಭಿಯಂತರರು, ಭದ್ರಾ ಯೋಜನಾ ವೃತ್ತ ಬಿ.ಆರ್. ಪ್ರಾಜೆಕ್ಟ್ | ಸದಸ್ಯ ಕಾರ್ಯದರ್ಶಿ |
| 4) | ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ | ಸದಸ್ಯರು |
| 5) | ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು | ಸದಸ್ಯರು |
| 6) | ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ | ಸದಸ್ಯರು |
| 7) | ಜಂಟಿ ಕೃಷಿ ನಿರ್ದೇಶಕರು, ಶಿವಮೊಗ್ಗ ವಿಭಾಗ, ಶಿವಮೊಗ್ಗ | ಸದಸ್ಯರು |
| **ಅಧಿಕಾರೇತರ ಸದಸ್ಯರು:-** | | |
| 1) | ಶ್ರೀ ಟಿ.ಹೆಚ್. ಶಿವಶಂಕರಪ್ಪ, ಶಾಸಕರು, ತರೀಕೆರೆ | ಸದಸ್ಯರು |
| 2) | ಶ್ರೀ ಬಿ.ಕೆ. ಸಂಗಮೇಶ್ವರ್, ಶಾಸಕರು, ಭದ್ರಾವತಿ | ಸದಸ್ಯರು |
| 3) | ಡಾ: ವೈ. ನಾಗಪ್ಪ, ಶಾಸಕರು, ಹರಿಹರ | ಸದಸ್ಯರು |
| 4) | ಶ್ರೀ ಕೆ.ಎಸ್. ಈಶ್ವರಪ್ಪ, ಶಾಸಕರು, ಶಿವಮೊಗ್ಗ | ಸದಸ್ಯರು |
| 5) | ಶ್ರೀ ಮಹಿಮಾ ಜೆ. ಪಟೇಲ್, ಶಾಸಕರು, ಚನ್ನಗಿರಿ | ಸದಸ್ಯರು |
| 6) | ಶ್ರೀ ಎಸ್.ಎ. ರವೀಂದ್ರನಾಥ್, ಶಾಸಕರು, ಮಾಯಕೊಂಡ | ಸದಸ್ಯರು |
| 7) | ಶ್ರೀ ಎಂ.ಪಿ. ರೇಣುಕಾಚಾರ್ಯ, ಶಾಸಕರು, ಹೊನ್ನಾಳಿ | ಸದಸ್ಯರು |
| 8) | ಶ್ರೀ ಜಿ. ಬಸವಣ್ಣೆಪ್ಪ, ಶಾಸಕರು, ಹೊಳೆ ಹೊನ್ನೂರು | ಸದಸ್ಯರು |

**ವಿಶೇಷ ಆಹ್ವಾನಿತ ಅಧಿಕಾರಿಗಳು:-**

1) ಭೂ ಅಭಿವೃದ್ಧಿ ಅಧಿಕಾರಿ (ತಾಂತ್ರಿಕ), ಭದ್ರಾ ಕಾಡಾ, ಶಿವಮೊಗ್ಗ
2) ಭೂ ಅಭಿವೃದ್ಧಿ ಅಧಿಕಾರಿ (ಕೃಷಿ), ಭದ್ರಾ ಕಾಡಾ, ಶಿವಮೊಗ್ಗ
3) ಸೀನಿಯರ್, ಆಗ್ರೋನಾಮಿಸ್ಟ್ ಅಗ್ರಿಕಲ್ಚರಲ್ ಯೂನಿವರ್ಸಿಟಿ, ಕತ್ತಲಗೆರೆ
4) ಮುಖ್ಯ ಕಾರ್ಯನಿರ್ವಾಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ
5) ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ
6) ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು

**ವಿಶೇಷ ಅಧಿಕಾರೇತರ ಆಹ್ವಾನಿತರು:-**

1) ಶ್ರೀ ಎಸ್. ಬಂಗಾರಪ್ಪ, ಲೋಕಸಭಾ ಸದಸ್ಯರು, ಶಿವಮೊಗ್ಗ
2) ಶ್ರೀ ಡಿ.ಸಿ. ಶ್ರೀಕಂಠಪ್ಪ, ಲೋಕಸಭಾ ಸದಸ್ಯರು, ಚಿಕ್ಕಮಗಳೂರು
3) ಶ್ರೀ ಜಿ.ಎಂ. ಸಿದ್ದೇಶ್ವರ್, ಲೋಕಸಭಾ ಸದಸ್ಯರು, ದಾವಣಗೆರೆ
4) ಶ್ರೀ ಶಾಮನೂರು ಶಿವಶಂಕರಪ್ಪ, ಶಾಸಕರು, ದಾವಣಗೆರೆ
5) ಶ್ರೀ ಹೆಚ್. ಹಾಲಪ್ಪ, ಶಾಸಕರು, ಹೊಸನಗರ
6) ಶ್ರೀ ಪಿ.ಟಿ. ಪರಮೇಶ್ವರ ನಾಯ್ಕ, ಶಾಸಕರು, ಹರಪನಹಳ್ಳಿ

7) ಶ್ರೀ ಕಾಗೋಡು ತಿಮ್ಮಪ್ಪ, ಮಾಜಿ ಸಚಿವರು, ಸಾಗರ, ಶಿವಮೊಗ್ಗ ಜಿಲ್ಲೆ
8) ಶ್ರೀ ಕೋಣನ ತಲೆ ಬೀರಪ್ಪ, ಭಾನುವಳ್ಳಿ, ಅಂಚೆ, ಭಾನುವಳ್ಳಿ ಹರಿಹರ ತಾಲ್ಲೂಕು.
9) ಶ್ರೀ ಹೆಚ್. ಬಸವರಾಜಪ್ಪ, ಎಲೆಬೇತೂರು, ದಾವಣಗೆರೆ ತಾಲ್ಲೂಕು
10) ಶ್ರೀ ಬಿ.ಹೆಚ್. ಹಾಲಪ್ಪ ಬಿನ್ ಹಾಲಪ್ಪ, ತ್ಯಾವಣಿಗಿ ಗ್ರಾಮ, ಚನ್ನಗಿರಿ ತಾಲ್ಲೂಕು
11) ಶ್ರೀ ಎಲ್.ಎಂ. ಸೀನೋಜಿರಾವ್ ಬಿನ್ ಮಂಜೋಜಿರಾವ್, ಟಿ.ಎಂ. ರೋಡ್, ಲಕ್ಕವಳ್ಳಿ
12) ಶ್ರೀ ಅವರಗೆರೆ ಕೆಂಚಪ್ಪ, ಅವರಗೆರೆ ಗ್ರಾಮ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ
13) ಶ್ರೀ ಇ. ರಾಮಚಂದ್ರಪ್ಪ ಬಿನ್ ಆಂಜಿನಪ್ಪ ಶಿಂಗ್ರಿಹಳ್ಳಿ ಗ್ರಾಮ, ಹರಪನಹಳ್ಳಿ

ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್.ಡಿ. 2 ಎಸ್ಆರ್ಎ 2000, ದಿನಾಂಕ: 3.2.2001 ರ ಅನ್ವಯ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಿವಶಂಕರ್**

ಪಿ.ಆರ್. 786 ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ-1), ಜಲ ಸಂಪನ್ಮೂಲ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ದಿನಗೂಲಿ ಆಧಾರದ ಮೇಲೆ:ಮಾಸಿಕ ವೇತನ ಸಿಬ್ಬಂದಿಯಾಗಿ ಸಲ್ಲಿಸಿರುವ ಸೇವೆಯನ್ನು ನಿವೃತ್ತಿ ವೇತನ ಸೌಲಭ್ಯಕ್ಕೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 2 ಎಸ್ಎಲ್ಸಿ 90, ದಿನಾಂಕ: 6.8.1990.
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 12 ಎಸ್ಎಲ್ಸಿ 97, ದಿನಾಂಕ: 26.9.1998.
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 30.9.2003.
4. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು, ಇ ವರ ಪತ್ರ ಸಂಖ್ಯೆ: ಪಿಎಂ/ಜಿ-I/2003-04/620, ದಿನಾಂಕ:9/14-1-2004

ಪ್ರಸ್ತಾವನೆ:

ಸರ್ಕಾರದ ವಿವಿಧ ಇ ಲಾಖೆಗಳಲ್ಲಿ ದಿನಾಂಕ: 1.7.1984ರಂದು ಅಥವಾ ಅದಕ್ಕಿಂತ ಮುಂಚೆ ನೇಮಕಾತಿ ಹೊಂದಿರುವ ಸಾಂದರ್ಭಿಕ:ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸುವ ಕುರಿತು ಮೇಲೆ (1)ರಲ್ಲಿ ಓದಲಾದ ದಿನಾಂಕ:6.8.1990ರ ಆದೇಶದಲ್ಲಿ ಸೂಚನೆಗಳನ್ನು ನೀಡಲಾಗಿದೆ. ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ,ದಿನಾಂಕ:6.8.1990ರ ಆದೇಶದ ಪ್ರಕಾರ ಸೇವೆಯಲ್ಲಿ ಸಕ್ರಮಗೊಳಿಸಿದ ನಂತರ ನಿವೃತ್ತಿ ಹೊಂದಿದ ನೌಕರರು ನಿವೃತ್ತಿ ವೇತನ ಸೌಲಭ್ಯ ಪಡೆಯಲು ಕನಿಷ್ಠ 10 ವರ್ಷಗಳ ಅರ್ಹತಾ ಸೇವೆಯನ್ನು ಪೂರೈಸದೇ ಇ ರುವ ಪ್ರಕರಣಗಳಲ್ಲಿ, ಅಂತಹ ನೌಕರರು ದಿನಗೂಲಿ ಆಧಾರದ ಮೇಲೆ ಸಲ್ಲಿಸಿರುವ ಸೇವೆ ಮತ್ತು ಮಾಸಿಕ ವೇತನ ಸಿಬ್ಬಂದಿಯಾಗಿ ಸೇವೆ ಸಲ್ಲಿಸಿದ್ದಲ್ಲಿ ಆ ಸೇವೆಯನ್ನು ಒಳಗೊಂಡಂತೆ ಸಲ್ಲಿಸಿರುವ ಸೇವೆಯ $^{1}/_{4}$ ಸೇವೆಯನ್ನು (ಗರಿಷ್ಠ ಮಿತಿ 3 ವರ್ಷಗಳು) ಕನಿಷ್ಠ ಅರ್ಹತಾ ಸೇವೆಗೆ ಕಡಿಮೆಯಾದ ಅವಧಿಗೆ ಒಳಪಟ್ಟು ಸೇರ್ಪಡೆ ಮಾಡಲು ಆದೇಶಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ:30.9.2003ರ ಆದೇಶದಲ್ಲಿ, ದಿನಾಂಕ: 1.9.2003 ರಿಂದ ಅನ್ವಯವಾಗುವಂತೆ, ವೃತ್ತಿ ವೇತನ ಪಡೆಯಲು ಕನಿಷ್ಠ 10 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಸಲ್ಲಿಸಬೇಕೆಂಬ ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಯ ನಿಯಮ 222ರ ಪರಂತುಕದಲ್ಲಿನ ಉಪಬಂಧಗಳನ್ನು ಮಾರ್ಪಡಿಸಿ ಕನಿಷ್ಠ 15 ವರ್ಷಗಳ ಅರ್ಹತಾ ಸೇವೆ ಸಲ್ಲಿಸಬೇಕೆಂದು ಆದೇಶಿಸಲಾಗಿದೆ. ಆದಕಾರಣ, ಮೇಲೆ (4)ರಲ್ಲಿ ಓದಲಾದ ಮಹಾಲೇಖಪಾಲರ ದಿನಾಂಕ:9/14-1-2004ರ ಪತ್ರದಲ್ಲಿ ದಿನಾಂಕ:1.9.2003ರಂದು ಅಥವಾ ನಂತರ ನಿವೃತ್ತಿ ಹೊಂದಿದ ಪ್ರಕರಣಗಳಲ್ಲಿ ದಿನಾಂಕ: 26.9.1998ರ ಆದೇಶದಲ್ಲಿ ನಮೂದಿಸಿರುವ "10 ವರ್ಷಗಳು" ರ ಬದಲಾಗಿ "15 ವರ್ಷಗಳು" ಎಂದು ಸೇರ್ಪಡೆ ಮಾಡಿ ಓದಿಕೊಂಡು ದಿನಗೂಲಿ ಆಧಾರದ ಮೇಲಿನ ಸೇವೆ, ಮಾಸಿಕ ವೇತನ ಸಿಬ್ಬಂದಿಯಾಗಿ ಸೇವೆ ಸಲ್ಲಿಸಿದ್ದಲ್ಲಿ ಆ ಸೇವೆಯು ಒಳಗೊಂಡಂತೆ $^{1}/_{4}$ ಸೇವೆಯನ್ನು (ಗರಿಷ್ಠ ಮಿತಿ 3 ವರ್ಷಗಳು) ನಿವೃತ್ತಿ ವೇತನಕ್ಕಾಗಿ ಅರ್ಹತೆ ಪಡೆಯಲು, 15 ವರ್ಷಗಳ ಅರ್ಹತಾ ಸೇವೆಗೆ ಕಡಿಮೆಯಾದ ಅವಧಿಗೆ ಒಳಪಟ್ಟು ಸೇರ್ಪಡೆ ಮಾಡುವ ಕುರಿತು ಸ್ಪಷ್ಟೀಕರಣ ಕೋರಲಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 15 ಸೇಸ್ಥಅ 2004, ಬೆಂಗಳೂರು, ದಿನಾಂಕ: 8ನೇ ಜುಲೈ 2004**

ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 12 ಎಸ್ಎಲ್ಸಿ 97, ದಿನಾಂಕ: 26.9.1998ರಲ್ಲಿ ದಿನಾಂಕ:6.8.90ರ ಸರ್ಕಾರದ ಆದೇಶದ ಪ್ಯಾರಾ 14ನ್ನು ಮಾರ್ಪಡಿಸಿದ್ದು, ಹೀಗೆ ಮಾರ್ಪಡಿಸಿದ ಪ್ಯಾರಾ 14ರ ಮೊದಲ ವಾಕ್ಯದಲ್ಲಿ "Short of 10 years" ಎಂದಿರುವುದನ್ನು ದಿನಾಂಕ:1.9.2003ರಿಂದ ಜಾರಿಗೆ ಬರುವಂತೆ "Short of 15 years" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್. 780 ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇ ಲಾಖೆ, (ಸೇವಾ ನಿಯಮಗಳು).